KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೨ | ಬೆಂಗಳೂರು, ಗುರುವಾರ, ನವೆಂಬರ್ ೧೫, ೨೦೦೭ (ಕಾರ್ತೀಕ ೨೪, ಶಕ ವರ್ಷ ೧೯೨೯) | ಸಂಚಿಕೆ ೪೫ |
|---|---|---|

## ಭಾಗ–೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ತಾತ್ಕಾಲಿಕ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:–**
1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 33 ಸಸಿವಿ 2006 ದಿನಾಂಕ: 22.8.2006
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 2 ಸಸಿವಿ 2006 ದಿನಾಂಕ: 7.10.06
3. 3. ಮಾಹಿತಿ ತಂತ್ರಜ್ಞಾನ ಇಲಾಖೆಯ ಕಡತ ಸಂಖ್ಯೆ: ಐಟಿಡಿ 05 ಡಿಪಿಎಸ್ 2004

**ಪ್ರಸ್ತಾವನೆ:**

ಮೇಲೆ ಉಲ್ಲೇಖ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮಾಹಿತಿ ತಂತ್ರಜ್ಞಾನ ಇಲಾಖೆಯ ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ: 1.4.2006 ರಿಂದ ಒಂದು ವರ್ಷದ ಅವಧಿಯವರಿಗೆ ಅಥವಾ ಇಲಾಖೆಯ ಪುನರ್ ಸಂಘಟನೆ ಆಗುವವರೆಗೆ ಮುಂದುವರೆಸಿ ಆದೇಶಿಸಿದೆ.

ಮೇಲೆ ಉಲ್ಲೇಖ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮಾಹಿತಿ ತಂತ್ರಜ್ಞಾನ ಇಲಾಖೆಯ ಹುದ್ದೆಗಳನ್ನು ಪುನರ್ ಸಂಘಟಿಸಿ ಆದೇಶಿಸಿದೆ.

ಮೇಲೆ ಉಲ್ಲೇಖ (3)ರಲ್ಲಿ ಓದಲಾದ ಕಡತದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ತಾತ್ಕಾಲಿಕ ಹುದ್ದೆಗಳನ್ನು ದಿ: 1.4.2007ರಿಂದ ಮತ್ತೊಂದು ವರ್ಷದ ಅವಧಿಗೆ ಮುಂದುವರಿಸುವಂತೆ ಪ್ರಸ್ತಾವನೆ ಇದೆ. ಇದರನ್ವಯ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 20 ಸಸಿವಿ 2007 ಬೆಂಗಳೂರು, ದಿನಾಂಕ: 10.4.2007**

ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 2 ಸಸಿವಿ 2005 ದಿನಾಂಕ: 7.10.2006ರಲ್ಲಿ ರದ್ದು ಪಡಿಸಿರುವ ತಾಂತ್ರಿಕ ಸಹಾಯಕರು: ಪ್ರೋಗ್ರಾಮರ್ (ವೇತನ ಶ್ರೇಣಿ ರಹಿತ)ನ ಎರಡು ಹುದ್ದೆಗಳನ್ನು ಹೊರತುಪಡಿಸಿ, ಕರ್ನಾಟಕ ಸರ್ಕಾರ ಸಚಿವಾಲಯದ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯಲ್ಲಿನ ಈ ಕೆಳಕಂಡ ಹುದ್ದೆಗಳ ಅವಧಿಯನ್ನು ದಿನಾಂಕ 1.4.2007ರಿಂದ ಒಂದು ವರ್ಷದ ಅವಧಿಯವರೆಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

| | | |
|---|---|---|
| 1. | ಪ್ರಧಾನ ಕಾರ್ಯದರ್ಶಿ : ಕಾರ್ಯದರ್ಶಿ | 1 ಹುದ್ದೆ |
| 2. | ಅಧೀನ ಕಾರ್ಯದರ್ಶಿ : ಶಾಖಾಧಿಕಾರಿ | 1 ಹುದ್ದೆ |
| 3. | ಆರ್ಥಿಕ ಸಲಹೆಗಾರರು (ವೇತನ ಶ್ರೇಣಿ ರಹಿತ) | 1 ಹುದ್ದೆ |
| 4. | ಹಿರಿಯ ಸಹಾಯಕರು : ಶೀಘ್ರಲಿಪಿಗಾರರು | 3 ಹುದ್ದೆಗಳು |
| 5. | ಕಿರಿಯ ಸಹಾಯಕರು | 1 ಹುದ್ದೆ |
| 6. | ದಲಾಯತ್ | 3 ಹುದ್ದೆಗಳು |

| | | |
|---|---|---|
| 7. | ಚಾಲಕರು | 2 ಹುದ್ದೆಗಳು |
| 8. | ಉಪ ಕಾರ್ಯದರ್ಶಿ | 1 ಹುದ್ದೆ |
| 9. | ಶಾಖಾಧಿಕಾರಿ | 1 ಹುದ್ದೆ |
| 10. | ಪತ್ರಾಂಕಿತ ಆಪ್ತ ಸಹಾಯಕರು | 1 ಹುದ್ದೆ |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರಲ್ಲಿ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 654

**ಎಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಆಸುಇ (ಸೇವೆಗಳು–2)

**ವಿಷಯ:** ಕರ್ನಾಟಕ ಲೋಕಾಯುಕ್ತ ಸಂಸ್ಥೆಯ ಸಾರ್ವಜನಿಕ ಸಂಪರ್ಕಾಧಿಕಾರಿ ಹುದ್ದೆಯನ್ನು ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ:–** ನಿಬಂಧಕರು, ಕರ್ನಾಟಕ ಲೋಕಾಯುಕ್ತ ಕಛೇರಿ, ಬೆಂಗಳೂರು, ಇವರ ಪತ್ರ ಸಂಖ್ಯೆ: ಲೋಕ್/ಸಿಬ್ಬಂದಿ(1)31/2006–07 ದಿನಾಂಕ: 04.06.2007

**ಪ್ರಸ್ತಾವನೆ:**

ಕರ್ನಾಟಕ ಲೋಕಾಯುಕ್ತ ಸಂಸ್ಥೆಯಲ್ಲಿರುವ ಸಾರ್ವಜನಿಕ ಸಂಪರ್ಕಾಧಿಕಾರಿ ಹುದ್ದೆಯು ಗ್ರೂಪ್ 'ಡಿ' ಕಿರಿಯ ಶ್ರೇಣಿಯಲ್ಲಿರುತ್ತದೆ (ವೇತನ ಶ್ರೇಣಿ ರೂ. 14050–350–14400–400–16800–450–19500–525–22650–600–25050) ಕರ್ನಾಟಕ ಲೋಕಾಯುಕ್ತದ ಕೆಲಸ ಕಾರ್ಯಗಳು ಹೆಚ್ಚಾಗುತ್ತಿರುವುದರಿಂದ ಸಾರ್ವಜನಿಕ ಸಂಪರ್ಕಾಧಿಕಾರಿಯವರೂ ಕೂಡ ಹೆಚ್ಚಿನ ಜವಾಬ್ದಾರಿಯಿಂದ ಕರ್ತವ್ಯ ನಿರ್ವಹಿಸಬೇಕಾಗಿರುತ್ತದೆ ಹಾಗೂ ಸಾರ್ವಜನಿಕರು, ಉನ್ನತ ಅಧಿಕಾರಿಗಳು ಮತ್ತು ಹೊರ ರಾಜ್ಯದ ಗಣ್ಯವ್ಯಕ್ತಿಗಳೊಂದಿಗೆ ಸಾರ್ವಜನಿಕ ಸಂಪರ್ಕಾಧಿಕಾರಿಯು ವ್ಯವಹರಿಸಬೇಕಾಗಿರುವುದರಿಂದ ಅವರ ಹುದ್ದೆಯನ್ನು ವೇತನ ಶ್ರೇಣಿ ರೂ.18150–450–19500–252–22650–600–26250–675–26925 ಕ್ಕೆ ಉನ್ನತೀಕರಿಸುವ ಅಗತ್ಯತೆ ಇರುತ್ತದೆ ಎಂದು ಮೇಲೆ ಓದಲಾದ ದಿನಾಂಕ 4.6.2007ರ ಪತ್ರದಲ್ಲಿ ನಿಬಂಧಕರು, ಲೋಕಾಯುಕ್ತ, ಬೆಂಗಳೂರು ಇವರು ತಿಳಿಸಿರುತ್ತಾರೆ.

ಸರ್ಕಾರವು ಇದನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 94 ಸೇಲೋಯು 2007 ಬೆಂಗಳೂರು, ದಿನಾಂಕ: 25.09.2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸನ್ನಿವೇಶದಲ್ಲಿ ಕರ್ನಾಟಕ ಲೋಕಾಯುಕ್ತ ಸಂಸ್ಥೆಯಲ್ಲಿರುವ ರೂ. 14050–350–14400–400–16800–450–19500–525–22650–600–25050 ವೇತನ ಶ್ರೇಣಿಯ ಸಾರ್ವಜನಿಕ ಸಂಪರ್ಕಾಧಿಕಾರಿ ಹುದ್ದೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರೂ. 18150–450–19500–525–22650–600–26250–675–26925 ವೇತನ ಶ್ರೇಣಿಗೆ ಉನ್ನತೀಕರಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ದಿನಾಂಕ: 22.9.2007 ರ ಟಿಪ್ಪಣಿ ಸಂಖ್ಯೆ: ಆಇ 830 ಸೇ–4/07 ರಲ್ಲಿ ನೀಡಿರುವ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

**ಪಿ. ಮಾರ್ಕೆಂಡೇಯ**
ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1745

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವಾ ನಿಯಮಗಳು–2)

**ವಿಷಯ:** 10 ಜನ ಜಿಲ್ಲಾ ನ್ಯಾಯಾಧೀಶರುಗಳ ಸೇವೆಯನ್ನು 58 ವರ್ಷಗಳ ಸೇವೆಯ ನಂತರ 60 ವರ್ಷಗಳವರೆಗೆ ಮುಂದುವರೆಸುವ ಬಗ್ಗೆ.

**ಓದಲಾಗಿದೆ:–** ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ಇವರ ಪತ್ರ ಸಂ: ಜಿಓಬಿ (1) : 296:2006, ದಿನಾಂಕ: 16.3.2007

**ಪ್ರಸ್ತಾವನೆ:**

ಜಿಲ್ಲಾ ನ್ಯಾಯಾಧೀಶರುಗಳ ಸೇವೆಯನ್ನು 58 ವರ್ಷಗಳ ನಂತರವೂ ಮುಂದುವರಿಸುವ ಬಗ್ಗೆ ಕರ್ನಾಟಕ ಉಚ್ಚ ನ್ಯಾಯಾಲಯದ ಸ್ಕ್ರಿನಿಂಗ್ ಸಮಿತಿ ಮೌಲ್ಯಮಾಪನ ಮಾಡಿ 58 ವರ್ಷದ ನಂತರವೂ ಕರ್ತವ್ಯ ನಿರ್ವಹಿಸಲು ಅರ್ಹರೆಂದು ತೀರ್ಮಾನಿಸಿದ್ದಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 95(ಎ) ರ ಅನ್ವಯ 58 ವರ್ಷಗಳ ವಯಸ್ಸಿನ ನಂತರ 60 ವರ್ಷಗಳವರೆಗೆ ಮುಂದುವರಿಸಬಹುದಾಗಿದೆ. ಅದರಂತೆ ಕೆಳಕಂಡ 10 ಜಿಲ್ಲಾ ನ್ಯಾಯಾಧೀಶರುಗಳ ಗೌಪ್ಯ ವರದಿ

ಹಾಗೂ ಇತರೆ ದಾಖಲೆಗಳನ್ನು ಪರಿಶೀಲಿಸಿ ಅವರುಗಳನ್ನು ನ್ಯಾಯಾಲಯದ ಪೂರ್ಣ ಪೀಠವು ಅನುಮೋದಿಸಿರುವುದಾಗಿ ಮೇಲೆ ಓದಲಾದ ದಿನಾಂಕ: 16.3.2007ರ ಪತ್ರದಲ್ಲಿ ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ಇವರು ತಿಳಿಸಿ ಕೆಳಕಂಡ 10 ಜಿಲ್ಲಾ ನ್ಯಾಯಾಧೀಶರುಗಳು, ಅವರುಗಳ ಹೆಸರಿನ ಮುಂದೆ ಸೂಚಿಸಿರುವ ದಿನಾಂಕದಂದು 58 ವರ್ಷಗಳ ವಯೋಮಿತಿಯನ್ನು ಪೂರೈಸಲಿದ್ದು ಇವರುಗಳ ಸೇವೆಯನ್ನು 58 ವರ್ಷಗಳ ನಂತರ 60 ವರ್ಷಗಳವರೆಗೆ ಸೇವೆಯಲ್ಲಿ ಮುಂದುವರಿಸಲು ಸರ್ಕಾರದ ಆದೇಶ ಕೋರಿರುತ್ತಾರೆ.

| ಕ್ರ. ಸಂ. | ಜಿಲ್ಲಾ ನ್ಯಾಯಾಧೀಶರುಗಳ ಹೆಸರು | 58 ವರ್ಷ ವಯೋಮಿತಿಯನ್ನು ಪೂರೈಸಲಿರುವ ದಿನಾಂಕ |
|---|---|---|
| 1 | ಶ್ರೀ ಶೆಟ್ಟರ್ ಸುಭಾಸ್ | 31.3.2007 |
| 2 | ಶ್ರೀ ಟಿ. ನಂಜಪ್ಪ | 31.3.2007 |
| 3 | ಶ್ರೀ ರಮೇಶ್ ಎಫ್ ದೊಡ್‌ವಾಡ್ | 30.4.2007 |
| 4 | ಶ್ರೀ ಬಿ.ಎಸ್. ರೆಡ್ಡಿ | 31.5.2007 |
| 5 | ಶ್ರೀ ಕೆಂಚೇಗೌಡ | 31.5.2007 |
| 6 | ಶ್ರೀ ಎ.ಟಿ. ಮುನೋಳಿ | 31.5.2007 |
| 7 | ಶ್ರೀ ಸುಭೋಷ್ ಟಿ. ಗೋಗಿ | 31.5.2007 |
| 8 | ಶ್ರೀ ಬಿ.ಎಂ. ಸಿಂಧಗಿ | 30.6.2007 |
| 9 | ಶ್ರೀ ಪ್ರಕಾಶ್‌ಕುಮಾರ್ | 30.6.2007 |
| 10 | ಶ್ರೀ ವಿ.ಸಿ. ಹತ್ತಿ | 30.6.2007 |

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 17 ಸೇಉನ್ಯಾ 2007, ಬೆಂಗಳೂರು, ದಿ: 29.3.2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕೆಳಕಂಡಂತೆ 10 ಜನ ಜಿಲ್ಲಾ ನ್ಯಾಯಾಧೀಶರುಗಳ ಸೇವೆಯನ್ನು ಅವರುಗಳ ಹೆಸರಿನ ಮುಂದೆ ನಮೂದಿಸಿರುವ ದಿನಾಂಕಗಳಂದು ಅವರು 58 ವರ್ಷಗಳ ವಯೋಮಿತಿ ಪೂರೈಸಿದ ನಂತರವೂ ಕರ್ನಾಟಕ ನಾಗರೀಕಾ ಸೇವಾ ನಿಯಮಾವಳಿಯ ನಿಯಮ 95(ಎ) ರನ್ವಯ 60 ವರ್ಷಗಳ ವಯೋಮಿತಿಯವರೆಗೆ ಸೇವೆಯಲ್ಲಿ ಮುಂದುವರಿಸಲು ಸರ್ಕಾರವು ಆದೇಶಿಸಿದೆ.

| ಕ್ರ. ಸಂ. | ಜಿಲ್ಲಾ ನ್ಯಾಯಾಧೀಶರುಗಳ ಹೆಸರು | 58 ವರ್ಷ ವಯೋಮಿತಿಯನ್ನು ಪೂರೈಸಲಿರುವ ದಿನಾಂಕ |
|---|---|---|
| 1 | ಶ್ರೀ ಶೆಟ್ಟರ್ ಸುಭಾಸ್<br>ಪ್ರಧಾನ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಮೈಸೂರು | 31.3.2007 |
| 2 | ಶ್ರೀ ಟಿ. ನಂಜಪ್ಪ<br>ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಚಿತ್ರದುರ್ಗ | 31.3.2007 |
| 3 | ಶ್ರೀ ರಮೇಶ್ ಎಫ್ ದೊಡ್‌ವಾಡ್<br>ಜಿಲ್ಲಾ ನ್ಯಾಯಾಧೀಶರು : ಪ್ರಿಸೈಡಿಂಗ್ ಆಫೀಸರ್ 2ನೇ ಅಪರ ಕಾರ್ಮಿಕ ನ್ಯಾಯಾಲಯ, ಬೆಂಗಳೂರು | 30.4.2007 |
| 4 | ಶ್ರೀ ಬಿ.ಎಸ್. ರೆಡ್ಡಿ<br>ಜಿಲ್ಲಾ ನ್ಯಾಯಾಧೀಶರು, ಓಓಡಿ,<br>ಸರ್ಕಾರದ ಕಾರ್ಯದರ್ಶಿಗಳು, ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ, ವಿಧಾನಸೌಧ, ಬೆಂಗಳೂರು | 31.5.2007 |
| 5 | ಶ್ರೀ ಕೆಂಚೇಗೌಡ<br>ಜಿಲ್ಲಾ ನ್ಯಾಯಾಧೀಶರು, ಓಓಡಿ<br>ಆಡಿಷನಲ್ ರಿಜಿಸ್ಟ್ರಾರ್, ಕರ್ನಾಟಕ ಲೋಕಾಯುಕ್ತ, ಬೆಂಗಳೂರು | 31.5.2007 |
| 6 | ಶ್ರೀ ಎ.ಟಿ. ಮುನೋಳಿ<br>36ನೇ ಅಪರ ಸಿಟಿ ಸಿವಿಲ್ ಮತ್ತು ಸೆಷನ್ಸ್ ನ್ಯಾಯಾಧೀಶರು<br>ಬೆಂಗಳೂರು ಸಿಟಿ | 31.5.2007 |
| 7 | ಶ್ರೀ ಸುಭೋಷ್ ಟಿ. ಗೋಗಿ<br>8ನೇ ಅಪರ ನಗರ ಸಿಟಿ ಸಿವಿಲ್ ಮತ್ತು ಸೆಷನ್ಸ್ ನ್ಯಾಯಾಧೀಶರು<br>ಬೆಂಗಳೂರು ಸಿಟಿ | 31.5.2007 |
| 8 | ಶ್ರೀ ಬಿ.ಎಂ. ಸಿಂಧಗಿ<br>ಪ್ರಿಸೈಡಿಂಗ್ ಆಫೀಸರ್, ಫಾಸ್ಟ್ ಟ್ರ್ಯಾಕ್ ಕೋರ್ಟ್-3, ಮೈಸೂರು | 30.6.2007 |

| | | |
|---|---|---|
| 9 | ಶ್ರೀ ಪ್ರಕಾಶ್‌ಕುಮಾರ್<br>ಪ್ರಿಸೈಡಿಂಗ್ ಆಫೀಸರ್, ಫಾಸ್ಟ್ ಟ್ರ್ಯಾಕ್ ಕೋರ್ಟ್3, ಮಂಡ್ಯ | 30.6.2007 |
| 10 | ಶ್ರೀ ವಿ.ಸಿ. ಹತ್ತಿ<br>ಜಿಲ್ಲಾ ನ್ಯಾಯಾಧೀಶರು, ಓಓಡಿ, ಸರ್ಕಾರದ ಅಪರ ಕಾರ್ಯದರ್ಶಿ ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ, ವಿಧಾನಸೌಧ, ಬೆಂಗಳೂರು | 30.6.2007 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

**ಎಂ. ವಾಸುದೇವಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವೆಗಳು–3)

ಪಿ.ಆರ್. 647

**Personnel and Administration Reforms Secretariat**
**CORRIGENDUM**
**No. DPAR 147 SFP 2006, Bangalore, dated 10.4.2007**

In the Government Order of even number dated 1.3.2007 regarding declaration of equivalence of the posts, the words ***"Additional Chief Conservator of Forests (Development)"*** occurring in the column 3 against Sl. No. (1) to (4) shall be corrected and read as ***"Additional Principal Chief Conservator of Forests (Development)".***

By Order and in the name of the
Governor of Karnataka

**ASHOK P. ATRE**
Under Secretary to Government
DPAR (Service-1)

PR- 631

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಶ್ರೀ ಜಿ.ಎಸ್. ಜಿದ್ದಿಮನಿ, ಕೆಎಎಸ್ ಅಧಿಕಾರಿ ಹಾಗೂ ಶ್ರೀ ಎ.ಐ. ಕಂಬೋಗಿ, ಪ್ರಥಮ ದರ್ಜೆ ಲೆಕ್ಕ ಸಹಾಯಕರು ಅವರುಗಳ ವಿರುದ್ಧ ಇಲಾಖಾ ವಿಚಾರಣೆ–ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:–**
1. ನೋಟೀಸ್ ಸಂಖ್ಯೆ: ಸಿಆಸುಇ 59 ಎಸ್‌ಇಎನ್ 05 ದಿನಾಂಕ: 16.06.2005
2. ಶ್ರೀ ಜಿ.ಎಸ್. ಜಿದ್ದಿಮನಿ, ಕೆಎಎಸ್ ಅಧಿಕಾರಿ ಅವರ ದಿನಾಂಕ: 10.07.2005ರ ಉತ್ತರ.
3. ಶ್ರೀ ಎ.ಐ. ಕಂಬೋಗಿ, ಪ್ರಥಮ ದರ್ಜೆ ಲೆಕ್ಕ ಸಹಾಯಕರು ಅವರ ದಿನಾಂಕ: 15.07.2005ರ ಉತ್ತರ.

**ಪ್ರಸ್ತಾವನೆ:**

ಕೃಷ್ಣ ಮೇಲ್ದಂಡೆ ಯೋಜನೆ, ಬಿಳಗಿಯಲ್ಲಿ ಶ್ರೀ ಜಿ.ಎಸ್. ಜಿದ್ದಿಮನಿ, ಕೆಎಎಸ್ ಅಧಿಕಾರಿ ಅವರು ವಿಶೇಷ ಭೂಸ್ವಾಧೀನಾಧಿಕಾರಿ ಹುದ್ದೆಯಲ್ಲಿ ಮತ್ತು ಶ್ರೀ ಎ.ಐ. ಕಂಬೋಗಿ, ಪ್ರಥಮ ದರ್ಜೆ ಲೆಕ್ಕ ಸಹಾಯಕರು ಅವರು ಪ್ರಥಮ ದರ್ಜೆ ಸಹಾಯಕರ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಬಿಳಗಿ ತಾಲ್ಲೂಕಿನ ಕಂದಗಲ್ಲ ಗ್ರಾಮದ ಪಿ.ಸಿ.ಪಿ.ನಂ. 57ರ ಭೂಸ್ವಾಧೀನಕ್ಕೆ ಸಂಬಂಧಿಸಿದಂತೆ ಅಫಿಡವಿಟ್‌ನಲ್ಲಿ ಪೂರ್ಣ ಮಾಹಿತಿಯನ್ನು ಸಲ್ಲಿಸಿ 625 ದಿವಸ ವಿಳಂಬ ಮಾಡಿ ಮೇಲ್ಮನವಿ ಸಲ್ಲಿಸಲು ಕಾರಣರಾದ ಆರೋಪಗಳ ಸಂಬಂಧ ಮೇಲ್ಕಂಡ ಅಧಿಕಾರಿ/ನೌಕರರುಗಳ ವಿರುದ್ಧ ಮೇಲೆ (1)ರಲ್ಲಿ ಓದಲಾದ ದಿನಾಂಕ:16.06.2005ರ ನೋಟೀಸ್‌ನ್ನು ಜಾರಿ ಮಾಡಿ ಸಮಜಾಯಿಷಿ ಕೇಳುವ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ನೋಟೀಸಿಗೆ ಶ್ರೀ ಜಿ.ಎಸ್. ಜಿದ್ದಿಮನಿ, ಕೆಎಎಸ್ ಅಧಿಕಾರಿ ಮತ್ತು ಶ್ರೀ ಎ.ಐ. ಕಂಬೋಗಿ, ಪ್ರಥಮ ದರ್ಜೆ ಲೆಕ್ಕ ಸಹಾಯಕರು ಅವರುಗಳು ಉತ್ತರ ಸಲ್ಲಿಸಿ ತಮ್ಮಗಳ ಮೇಲೆ ಹೊರಿಸಲಾದ ಆರೋಪವನ್ನು ನಿರಾಕರಿಸಿರುತ್ತಾರೆ. ಆದ್ದರಿಂದ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 59 ಎಸ್‌ಇಎನ್ 2005 ಬೆಂಗಳೂರು, ದಿನಾಂಕ: 3ನೇ ಏಪ್ರಿಲ್ 2007**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 13ನ್ನು ಓದಿಕೊಂಡಂತೆ ನಿಯಮ 11(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಜಿದ್ದಿಮನಿ, ಕೆಎಎಸ್ ಅಧಿಕಾರಿ ಹಾಗೂ ಶ್ರೀ ಎ.ಐ. ಕಂಬೋಗಿ, ಪ್ರಥಮ ದರ್ಜೆ ಲೆಕ್ಕ ಸಹಾಯಕರು ಅವರುಗಳ ವಿರುದ್ಧ ಮಾಡಲಾದ ಆರೋಪಗಳ ಕುರಿತಂತೆ ವಿಚಾರಣೆ ಮಾಡಲು ಶ್ರೀ ಡಿ.ವಿ. ಶೇಟ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಧಾರವಾಡ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಈ ವಿಚಾರಣೆಗಾಗಿ ಅವರು ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 16 ಸೇಇವಿ 05 ದಿನಾಂಕ: 23.08.2005 ರನ್ವಯ ರೂ. 6,000/– (ಆರು ಸಾವಿರ ರೂಪಾಯಿಗಳನ್ನು ಮಾತ್ರ) ಗೌರವಧನ ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 45 ಸೇಇವಿ 2001 ದಿನಾಂಕ: 04.03.2002 ರಂತೆ ರೂ.1000/– ವಾಹನ ಭತ್ಯೆಯನ್ನು ಪಡೆಯುತ್ತಾರೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ವಿಶೇಷ ಭೂಸ್ವಾಧೀನಕಾರಿ, ಕೃಷ್ಣ ಮೇಲ್ದಂಡೆ ಯೋಜನೆ, ಬೀಳಗಿ ಅವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ ಇತ್ಯಾದಿಗಳನ್ನು ಒದಗಿಸಲು ಧಾರವಾಡ ಜಿಲ್ಲಾಧಿಕಾರಿಗಳು ಕ್ರಮ ಕೈಗೊಳ್ಳುತ್ತಾರೆ. ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

**ಎಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಆಸುಇ (ಸೇವೆಗಳು–3)

ಪಿ.ಆರ್. 683

**ವಿಷಯ:** ಶ್ರೀ ಜೆ.ಆರ್. ಲೋಬೋ, ಕೆಎಎಸ್ ಅಧಿಕಾರಿ ಅವರ ವಿರುದ್ಧ ಇಲಾಖಾ ವಿಚಾರಣೆ–ವಿಚಾರಣಾಧಿಕಾರಿಯನ್ನು ಬದಲಾಯಿಸಿ ನೇಮಿಸುವ ಬಗ್ಗೆ.

**ಓದಲಾಗಿದೆ:–**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 141 ಎಸ್ಇಎನ್ 2005 ದಿ: 29.01.2007
2. ಶ್ರೀ ಬಿ. ಶಂಕರನಾರಾಯಣ ಭಟ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಮಂಗಳೂರು ಅವರ ಪತ್ರ ದಿ: 24.02.2007

**ಪ್ರಸ್ತಾವನೆ:**

ಶ್ರೀ ಜೆ.ಆರ್. ಲೋಬೋ, ಕೆಎಎಸ್ ಅಧಿಕಾರಿ ಅವರ ವಿರುದ್ಧ ಮಾಡಲಾದ ಆರೋಪಗಳ ಕುರಿತಂತೆ ವಿಚಾರಣೆ ಮಾಡಲು ಶ್ರೀ ಬಿ. ಶಂಕರನಾರಾಯಣ ಭಟ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಮಂಗಳೂರು ಅವರನ್ನು ವಿಚಾರಣಾಧಿಕಾರಿಯನ್ನಾಗಿ ಮೇಲೆ (1)ರಲ್ಲಿ ಓದಲಾದ ದಿನಾಂಕ:29.01.2007ರ ಸರ್ಕಾರಿ ಆದೇಶದಲ್ಲಿ ನೇಮಿಸಲಾಗಿತ್ತು. ಸದರಿಯವರು ಮೇಲೆ (2)ರಲ್ಲಿ ಓದಲಾದ ದಿನಾಂಕ: 24.02.2007ರ ಪತ್ರದಲ್ಲಿ ತಾವು ಅನಾರೋಗ್ಯ ನಿಮಿತ್ತ ಆಸ್ಪತ್ರೆಗೆ ಸೇರಿ ಬಿಡುಗಡೆಯಾಗಿದ್ದು, ವೈದ್ಯರು ವಿಶ್ರಾಂತಿ ಅಗತ್ಯವಿದೆಯೆಂದು ಹೇಳಿರುವುದರ ಜೊತೆಗೆ ತಾವು ಈ ವಿಚಾರಣೆಯನ್ನು ನಡೆಸಲು ಸಾಧ್ಯವಾಗದೇ ಇರುವ ಹಿನ್ನೆಲೆಯಲ್ಲಿ ಬೇರೊಬ್ಬ ವಿಚಾರಣಾಧಿಕಾರಿಯನ್ನು ನೇಮಿಸುವಂತೆ ಕೋರಿರುತ್ತಾರೆ. ಸದರಿಯವರ ಕೋರಿಕೆಯನ್ನು ಪರಿಶೀಲಿಸಿದ ಸರ್ಕಾರವು ಈ ಪ್ರಕರಣದಲ್ಲಿ ಬೇರೊಬ್ಬ ವಿಚಾರಣಾಧಿಕಾರಿಯನ್ನು ನೇಮಿಸಲು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 141 ಎಸ್ಇಎನ್ 2005 ಬೆಂಗಳೂರು, ದಿನಾಂಕ: 4ನೇ ಏಪ್ರಿಲ್ 2007**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಜೆ.ಆರ್. ಲೋಬೋ, ಕೆಎಎಸ್ ಅಧಿಕಾರಿ ಅವರ ವಿರುದ್ಧ ಮಾಡಲಾದ ಆರೋಪಗಳ ಕುರಿತಂತೆ ವಿಚಾರಣೆ ಮಾಡಲು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿದ್ದ ಶ್ರೀ ಬಿ. ಶಂಕರನಾರಾಯಣ ಭಟ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಮಂಗಳೂರು ಅವರ ಬದಲಾಗಿ ಶ್ರೀ ಉಮೇಶ್ ಶೆಟ್ಟಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಮಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಈ ವಿಚಾರಣೆಗಾಗಿ ಅವರು ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 16 ಸೇಇವಿ 05 ದಿನಾಂಕ: 23.08.2005 ರನ್ವಯ ರೂ. 6,000/– (ಆರು ಸಾವಿರ ರೂಪಾಯಿಗಳನ್ನು ಮಾತ್ರ) ಗೌರವಧನ ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 45 ಸೇಇವಿ 2001 ದಿನಾಂಕ: 04.03.2002 ರಂತೆ ರೂ.1000/– ವಾಹನ ಭತ್ಯೆಯನ್ನು ಪಡೆಯುತ್ತಾರೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ದಕ್ಷಿಣ ಕನ್ನಡ ಜಿಲ್ಲಾಧಿಕಾರಿಗಳ ಕೇಂದ್ರಸ್ಥಾನಿಕ ಸಹಾಯಕರು ರವರನ್ನೇ ಮಂಡನಾಧಿಕಾರಿಯನ್ನಾಗಿ ಮುಂದುವರಿಸುತ್ತದೆ. ವಿಚಾರಣಾಧಿಕಾರಿಗಳಿಗೆ ಸೂಕ್ತ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ ಇತ್ಯಾದಿಗಳು ಒದಗಿಸಲು ಆಯುಕ್ತರು, ಮಂಗಳೂರು ಮಹಾನಗರ ಪಾಲಿಕೆ ಅವರು ಕ್ರಮ ಕೈಗೊಳ್ಳುತ್ತಾರೆ. ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸಿರುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 682

**ಎಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ)
ಸಿಆಸುಇ (ಸೇವೆಗಳು–3)

**ವಿಷಯ:** ಶ್ರೀ ಅಬ್ದುಲ್ ರಹೀಂ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಸನ್ಮಾನ್ಯ ಲೋಕಾಯುಕ್ತರವರಿಗೆ ವಹಿಸುವ ಬಗ್ಗೆ.

**ಓದಲಾಗಿದೆ:–** ಉಪ ನಿಬಂಧಕರು ವಿಚಾರಣೆಗಳು–5, ಕರ್ನಾಟಕ ಲೋಕಾಯುಕ್ತ ಬೆಂಗಳೂರು ಅವರ ಅರೆ ಸರ್ಕಾರಿ ಪತ್ರ ಸಂಖ್ಯೆ: ಕಂಪ್ಲೆಂಟ್/ಲೋಕ್/ಬಿಸಿಡಿ.227/2004/ ಡಿಆರ್ಇ–5 ದಿನಾಂಕ: 31.01.2007.

**ಪ್ರಸ್ತಾವನೆ:**

ಉಪ ನಿಬಂಧಕರು ವಿಚಾರಣೆಗಳು–5, ಕರ್ನಾಟಕ ಲೋಕಾಯುಕ್ತ ಬೆಂಗಳೂರು ಅವರು ಮೇಲೆ ಓದಲಾದ ದಿ:31.01.07ರ ತಮ್ಮ ಪತ್ರದಲ್ಲಿ ಸನ್ಮಾನ್ಯ ಲೋಕಾಯುಕ್ತರವರು ದಿ: 25.01.07ರಂದು ಸರ್ಕಾರಕ್ಕೆ ಮಾಡಿದ ಶಿಫಾರಸ್ಸಿನ ಪ್ರತಿಯನ್ನು ಕಳುಹಿಸಿದ್ದಾರೆ. ಶ್ರೀ ಅಬ್ದುಲ್ ರಹೀಂ, ಕೆಎಎಸ್ ಅಧಿಕಾರಿ ಅವರು ವಿಶೇಷ ಭೂಸ್ವಾಧೀನಾಧಿಕಾರಿಗಳ ಹಾಗೂ ಎಸ್ಟೇಟ್ ಅಧಿಕಾರಿಗಳ ಕಛೇರಿ, ರಾಷ್ಟ್ರೀಯ ಹೆದ್ದಾರಿ, ಬೆಂಗಳೂರು ಇಲ್ಲಿ ವಿಶೇಷ ಭೂಸ್ವಾಧೀನಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ, ರಾಷ್ಟ್ರೀಯ ಹೆದ್ದಾರಿ–4 ರ ನೆಲಮಂಗಲ–ತುಮಕೂರು ರಸ್ತೆ ವಿಸ್ತರಣೆಗೆ ಬೆಂಗಳೂರು ಗ್ರಾಮಾಂತರ ಜಿಲ್ಲೆ, ನೆಲಮಂಗಲ ತಾಲ್ಲೂಕು, ಕಸಬಾ ಹೋಬಳಿ, ತೋಣಚಿನಕುಪ್ಪೆ ಗ್ರಾಮದ ಸ.ನಂ. 8 ಮತ್ತು 9ರಲ್ಲಿನ 21 ಗುಂಟೆ ಮತ್ತು 10 ಗುಂಟೆ ಜಮೀನಿನ ಭೂಸ್ವಾಧೀನದ ಸಂಬಂಧ ಪರಿಹಾರ ಪಾವತಿ ಮಾಡುವುದರಲ್ಲಿ ತಮ್ಮ ಅಧಿಕಾರ ದುರುಪಯೋಗಪಡಿಸಿಕೊಂಡಿದ್ದಾರೆಂದು ಶ್ರೀ ಜಿ.ಕೆ. ಶಿವಕುಮಾರ್, ಬೆಂಗಳೂರು ಅವರು ಸಲ್ಲಿಸಿದ ದೂರಿನ ಮೇರೆಗೆ ತನಿಖೆಯನ್ನು ನಡೆಸಿದ ಸನ್ಮಾನ್ಯ ಲೋಕಾಯುಕ್ತರವರು ಮೇಲೆ ಓದಲಾದ ತಮ್ಮ ಪತ್ರದಲ್ಲಿ ಉಲ್ಲೇಖಿಸಿದ ಲೋಕಾಯುಕ್ತ ಕಾಯ್ದೆ ಕಲಂ 12(3)ರಡಿಯ ತಮ್ಮ ವರದಿಯಲ್ಲಿ ಸದರಿ ಅಧಿಕಾರಿಯವರ ವಿರುದ್ಧ ಮಾಡಿರುವ ಆರೋಪವು ಮೇಲ್ನೋಟಕ್ಕೆ ಸತ್ಯವೆಂದು ಕಂಡು ಬರುತ್ತದೆಯೆಂದು ತಿಳಿಸಿ ಅವರ ವಿರುದ್ಧ ಪೂರ್ಣ ಪ್ರಮಾಣದ ತನಿಖೆಗಾಗಿ ಸಿ.ಸಿ.ಎ. ನಿಯಮ 14–ಎ ರಡಿ ತಮಗೆ ವಹಿಸುವಂತೆ ತಮಗೆ ಶಿಫಾರಸ್ಸು ಮಾಡಿದ್ದಾರೆ. ಸನ್ಮಾನ್ಯ ಲೋಕಾಯುಕ್ತರ ಶಿಫಾರಸ್ಸನ್ನು ಪರಿಶೀಲಿಸಿದ ಸರ್ಕಾರವು ಅದನ್ನು ಒಪ್ಪಿಕೊಂಡು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 50 ಎಸ್ಇಎನ್ 2007 ಬೆಂಗಳೂರು, ದಿನಾಂಕ: 7ನೇ ಏಪ್ರಿಲ್ 2007**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 14–ಎರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಅಬ್ದುಲ್ ರಹೀಂ, ಕೆಎಎಸ್ ಅಧಿಕಾರಿ ಅವರ ವಿರುದ್ಧ ಮೇಲೆ ಹೇಳಲಾದ ಆರೋಪಗಳ ಕುರಿತು ಪೂರ್ಣ ಪ್ರಮಾಣದ ಇಲಾಖಾ ವಿಚಾರಣೆಯನ್ನು ಸನ್ಮಾನ್ಯ ಲೋಕಾಯುಕ್ತರ ಮೂಲಕ ನಡೆಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 681

**ಎಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರ)
ಸಿಆಸುಇ (ಸೇವೆಗಳು–3)

**ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ**

**ತಿದ್ದುಪಡಿ ಆದೇಶ**

**ಸಂಖ್ಯೆ: ಕೃತೋಇ 42 ತೋಯೋಕಾ 2007 ಬೆಂಗಳೂರು, ದಿನಾಂಕ: 07.03.2007**

ದಿನಾಂಕ: 5.9.2006ರಂದು ಹೊರಡಿಸಲಾದ ಸರ್ಕಾರದ ಆದೇಶ ಸಂಖ್ಯೆ: ಕೃತೋಇ 97 ತೋಯೋಕಾ 2006ರಲ್ಲಿನ ಅಂಶಗಳನ್ನು ಕೆಳಕಂಡಂತೆ ತಿದ್ದಿ ಓದಿಕೊಳ್ಳತಕ್ಕದ್ದು.

| ಆದೇಶದ ಪ್ಯಾರಾ | ತಿದ್ದುಪಡಿ | ಅನುದಾನ (ರೂ. ಕೋಟಿಗಳಲ್ಲಿ) |
|---|---|---|
| 2(3) | ಹಣ್ಣುಗಳ ಸಂಸ್ಕರಣೆ ಮಾಡುವ ಘಟಕಗಳ ಸ್ಥಾಪನೆ ಹಾಗೂ ಸಂಶೋಧನೆ ಮತ್ತು ವೈಜ್ಞಾನಿಕ ಶೇಖರಣೆ, ಗ್ರೇಡಿಂಗ್, ಪ್ಯಾಕ್‌ಹೌಸ್ ಹಾಗೂ ಫ್ಲೂಮಿಗೇಷನ್ ಘಟಕಗಳಿಗೆ ಸಹಾಯಧನ–ಸಮರ್ಪಕವಾದ ಮತ್ತು ಕಾರ್ಯಕ್ಷಮತೆಯುಳ್ಳ ಪ್ರತ್ಯೇಕ ಯೋಜನೆಗಳನ್ನು ಸಿದ್ದಪಡಿಸಿ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ಈ ಆದೇಶದ ಮೂರನೇ ಪ್ಯಾರಾದಲ್ಲಿ ತಿಳಿಸಿದ ಮಾರ್ಗಸೂಚಿಗಳನ್ವಯ ಅನುಷ್ಟಾನಗೊಳಿಸಬೇಕು. | 5.10 |
| 3(8) | ದಿನಾಂಕ: 1.4.2006ರ ನಂತರ ಸ್ಥಾಪನೆಗೊಳ್ಳುವ ಘಟಕಗಳಿಗೆ, ಯಾವುದೇ ಮೂಲದಿಂದ ಇಲ್ಲಿಯವರೆಗೆ ಸಹಾಯಧನ ಪಡೆಯದಿದ್ದಲ್ಲಿ ಅಂತಹ ಘಟಕಗಳು ಈ ಯೋಜನೆಯಡಿ ಅರ್ಹತೆ ಪಡೆಯಲಿವೆ. | -- |
| 3(10) | "ಸಹಾಯಧನವು ಬ್ಯಾಕ್–ಎಂಡೆಡ್ (Back-ended) ರೂಪದಲ್ಲಿ/ಬ್ಯಾಂಕ್ ಗ್ಯಾರಂಟಿ ಆಧಾರದ ಮೇಲೆ ದೊರೆಯಲಿದೆ. ಸಹಾಯಧನವನ್ನು ಯೋಜನೆ ಕಾರ್ಯಾರಂಭಿಸಿದ ನಂತರ (after "Commissioning) ಮತ್ತು ಸಕ್ಷಮ ಪ್ರಾಧಿಕಾರದಿಂದ ತಪಾಸಣೆ | -- |

| | | |
|---|---|---|
| | ನಂತರ (after Inspection by Competent Authority) ವಿತರಿಸಲಾಗುವುದು." ಬ್ಯಾಂಕ್‌ಗ್ಯಾರಂಟಿ ಆಧಾರವನ್ನು ಪರಿಗಣಿಸಿ ಮೂರು ಹಂತಗಳಲ್ಲಿ ಎಂದರೆ ಮೊದಲನೇ ಕಂತು 35%, ಉಳಿದ ಎರಡು ಕಂತುಗಳನ್ನು ಕ್ರಮವಾಗಿ 30% ಮತ್ತು 35%ರ ಪ್ರಮಾಣದಲ್ಲಿ ಸಹಾಯಧನ ನೆರವು ಒದಗಿಸಲಾಗುವುದು. | |

ಈ ಕಾರ್ಯಕ್ರಮಗಳನ್ನು ಕೆಳಕಂಡ ಮಾರ್ಗಸೂಚಿಗಳನ್ವಯ ಜಾರಿಗೊಳಿಸತಕ್ಕದ್ದು.

1. ಪ್ರಾಜೆಕ್ಟ್‌ಗಳಿಗೆ ನಿಯಮಾನುಸಾರ ಸಕ್ಷಮ ಪ್ರಾಧಿಕಾರದಿಂದ ಒಪ್ಪಿಗೆ ಪಡೆಯತಕ್ಕದ್ದು.
2. ಈ ಯೋಜನೆಯ ಅನುಷ್ಠಾನದಲ್ಲಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆ ಪಾರದರ್ಶಕತೆ ನಿಯಮ, ಮಾಹಿತಿ ಹಕ್ಕುನಿಯಮಗಳನ್ನು ಕಡ್ಡಾಯವಾಗಿ ಪಾಲಿಸತಕ್ಕದ್ದು.
3. ಈ ಯೋಜನೆಯಡಿ ರೈತರು, ರೈತ ಗುಂಪುಗಳು, ಸರ್ಕಾರಿ ಸಂಸ್ಥೆಗಳು, ಅರೆ ಸರ್ಕಾರಿ ಸಂಸ್ಥೆಗಳು, ಉದ್ಯಮಿಗಳು, ಸ್ವಸಹಾಯ ಗುಂಪುಗಳು, ಸಂಘಗಳು, ಸಹಕಾರ ಸಂಸ್ಥೆಗಳು ನೆರವು ಪಡೆಯಲು ಅರ್ಹರಾಗಿರುತ್ತಾರೆ.
4. ಯೋಜನೆಯನ್ನು ಸುಗಮವಾಗಿ ಅನುಷ್ಠಾನಗೊಳಿಸಲು ತೋಟಗಾರಿಕೆ ನಿರ್ದೇಶಕರು ನಿಯಮಾನುಸಾರ ಹೆಚ್ಚಿನ ಅನುಷ್ಠಾನ ಮಾರ್ಗಸೂಚಿಯನ್ನು (Operational Guidelines) ನೀಡುವರು.
5. ಯೋಜನೆಯ ಪ್ರಗತಿ ವರದಿಯನ್ನು ತೋಟಗಾರಿಕೆ ನಿರ್ದೇಶಕರು ನಿಯಮಿತವಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಉಳಿದಂತೆ ಮೇಲೆ ಓದಲಾದ ಆದೇಶ ಮತ್ತು ಆದೇಶ ಸಂಖ್ಯೆ:ಕೃತೋಇ 10 ತೋಯೋಕಾ 2007 ದಿ: 19.2.2007ರಲ್ಲಿನ ಮಾರ್ಗಸೂಚಿಗಳಲ್ಲಿ ಯಾವುದೇ ಬದಲಾವಣೆಗಳು ಇರುವುದಿಲ್ಲ.

ಈ ಆದೇಶವು ತಕ್ಷಣದಿಂದ ಜಾರಿಗೆ ಬಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 614

**ಎಸ್. ರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ (ತೋಟಗಾರಿಕೆ)
ಕೃಷಿ ಮತ್ತು ತೋಟಗಾರಿಕೆ ಇಲಾಖೆ

**ತಿದ್ದುಪಡಿ ಆದೇಶ**

**ಸಂಖ್ಯೆ: ಕೃತೋಇ 10 ತೋಯೋಕಾ 2007 ಬೆಂಗಳೂರು, ದಿನಾಂಕ: 19.02.2007**

ದಿನಾಂಕ: 14.2.2007ರಲ್ಲಿ ಹೊರಡಿಸಲಾದ ಇದೇ ಸಮಸಂಖ್ಯೆಯ ತಿದ್ದುಪಡಿ ಆದೇಶವನ್ನು ಹಿಂದಕ್ಕೆ ಪಡೆಯಲಾಗಿದೆ. ಮುಂದುವರೆದು ದಿನಾಂಕ: 5.9.2006ರಂದು ಹೊರಡಿಸಲಾದ ಸರ್ಕಾರದ ಆದೇಶ ಸಂಖ್ಯೆ: ಕೃತೋಇ 97 ತೋಯೋಕಾ 2006ರಲ್ಲಿನ ಅಂಶಗಳನ್ನು ಕೆಳಕಂಡಂತೆ ತಿದ್ದಿ ಓದಿಕೊಳ್ಳತಕ್ಕದ್ದು.

| ಆದೇಶದ ಪ್ಯಾರಾ | ತಿದ್ದುಪಡಿ | ಅನುದಾನ (ರೂ. ಕೋಟಿಗಳಲ್ಲಿ) |
|---|---|---|
| 2(4) | ಲಾಲ್‌ಬಾಗ್‌ನಲ್ಲಿ ಮಾದರಿ ಕೊಯ್ಲೋತ್ತರ ನಿರ್ವಹಣೆ ವಿಭಾಗದ ನಿರ್ಮಾಣ/ಸ್ಥಾಪನೆ | 0.50 |
| 2(5) | ಕೊಯ್ಲೋತ್ತರ ನಿರ್ವಹಣೆ ಚಟುವಟಿಕೆಗಳ ಬಗ್ಗೆ ತರಬೇತಿ, ಪ್ರಚಾರ ಮತ್ತು ಜಾಹಿರಾತು | 0.55 |
| 2(7) | ರಾಜ್ಯದಲ್ಲಿನ ಕೃಷಿ ವಿಶ್ವವಿದ್ಯಾನಿಲಯ ಮತ್ತು ಇತರೆ ಕೃಷಿ/ತೋಟಗಾರಿಕೆ ಸಂಶೋಧನಾ ಸಂಸ್ಥೆಗಳಿಗೆ ನೆರವು | 0.56 |
| 2(8) | ತೋಟಗಾರಿಕೆ ಉತ್ಪನ್ನಗಳ ಮೌಲ್ಯವರ್ಧನೆ ಹಾಗೂ ಸಂಸ್ಕರಣೆಗಳಿಗೆ ಸಂಬಂಧಿಸಿದಂತೆ ಕಾಯ್ದಿರಿಸಲಾಗಿದೆ | 0.10 |

ಈ ಕಾರ್ಯಕ್ರಮಗಳನ್ನು ಕೆಳಕಂಡ ಮಾರ್ಗಸೂಚಿಗಳನ್ವಯ ಜಾರಿಗೊಳಿಸತಕ್ಕದ್ದು.

1. ಪ್ರಾಜೆಕ್ಟ್‌ಗಳಿಗೆ ನಿಯಮಾನುಸಾರ ಸಕ್ಷಮ ಪ್ರಾಧಿಕಾರದಿಂದ ಒಪ್ಪಿಗೆ ಪಡೆಯತಕ್ಕದ್ದು.
2. ಈ ಯೋಜನೆಯ ಅನುಷ್ಠಾನದಲ್ಲಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆ ಪಾರದರ್ಶಕತೆ ನಿಯಮ, ಮಾಹಿತಿ ಹಕ್ಕುನಿಯಮಗಳನ್ನು ಕಡ್ಡಾಯವಾಗಿ ಪಾಲಿಸತಕ್ಕದ್ದು.
3. ಈ ಯೋಜನೆಯಡಿ ರೈತರು, ರೈತ ಗುಂಪುಗಳು, ಸರ್ಕಾರಿ ಸಂಸ್ಥೆಗಳು, ಅರೆ ಸರ್ಕಾರಿ ಸಂಸ್ಥೆಗಳು, ಉದ್ಯಮಿಗಳು, ಸ್ವಸಹಾಯ ಗುಂಪುಗಳು, ಸಂಘಗಳು, ಸಹಕಾರ ಸಂಸ್ಥೆಗಳು ನೆರವು ಪಡೆಯಲು ಅರ್ಹರಾಗಿರುತ್ತಾರೆ.
4. ಯೋಜನೆಯನ್ನು ಸುಗಮವಾಗಿ ಅನುಷ್ಠಾನಗೊಳಿಸಲು ತೋಟಗಾರಿಕೆ ನಿರ್ದೇಶಕರು ನಿಯಮಾನುಸಾರ ಹೆಚ್ಚಿನ ಅನುಷ್ಠಾನ ಮಾರ್ಗಸೂಚಿಗಳನ್ನು (Operational Guidelines) ನೀಡುವರು.
5. ಯೋಜನೆಯ ಪ್ರಗತಿ ವರದಿಗಳನ್ನು ತೋಟಗಾರಿಕೆ ನಿರ್ದೇಶಕರು ನಿಯಮಿತವಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಉಳಿದಂತೆ ಮೇಲೆ ಓದಲಾದ ಆದೇಶದಲ್ಲಿನ ಮಾರ್ಗಸೂಚಿಗಳಲ್ಲಿ ಯಾವುದೇ ಬದಲಾವಣೆಗಳು ಇರುವುದಿಲ್ಲ. ಈ ಆದೇಶವು ತಕ್ಷಣದಿಂದ ಜಾರಿಗೆ ಬಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 613

**ಎಸ್. ರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ (ತೋಟಗಾರಿಕೆ)
ಕೃಷಿ ಮತ್ತು ತೋಟಗಾರಿಕೆ ಇಲಾಖೆ

**ತಿದ್ದುಪಡಿ ಆದೇಶ**

**ಸಂಖ್ಯೆ: ಕೃತೋಇ 10 ತೋಯೋಕಾ 2007 ಬೆಂಗಳೂರು, ದಿನಾಂಕ: 14.02.2007**

ದಿನಾಂಕ: 5.9.2006ರಂದು ಹೊರಡಿಸಲಾದ ಸರ್ಕಾರದ ಆದೇಶ ಸಂಖ್ಯೆ: ಕೃತೋಇ 97 ತೋಯೋಕಾ 2006ರಲ್ಲಿನ ಅಂಶಗಳನ್ನು ಕೆಳಕಂಡಂತೆ ತಿದ್ದಿ ಓದಿಕೊಳ್ಳತಕ್ಕದ್ದು.

| ಆದೇಶದ ಪ್ಯಾರಾ | ತಿದ್ದುಪಡಿ | ಅನುದಾನ (ರೂ. ಕೋಟಿಗಳಲ್ಲಿ) |
|---|---|---|
| 2(4) | ಲಾಲ್‌ಬಾಗ್‌ನಲ್ಲಿ ಮಾದರಿ ಕೋಯ್ಲೋತ್ತರ ನಿರ್ವಹಣೆ ವಿಭಾಗದ ನಿರ್ಮಾಣ/ಸ್ಥಾಪನೆ | 0.50 |
| 2(5) | ಕೋಯ್ಲೋತ್ತರ ನಿರ್ವಹಣೆ ಚಟುವಟಿಕೆಗಳ ಬಗ್ಗೆ ತರಬೇತಿ, ಪ್ರಚಾರ ಮತ್ತು ಜಾಹಿರಾತು | 0.55 |
| 2(7) | ರಾಜ್ಯದಲ್ಲಿನ ಕೃಷಿ ವಿಶ್ವವಿದ್ಯಾನಿಲಯ ಮತ್ತು ಇತರೆ ಕೃಷಿ/ತೋಟಗಾರಿಕೆ ಸಂಶೋಧನಾ ಸಂಸ್ಥೆಗಳಿಗೆ ನೆರವು | 0.56 |
| 2(8) | ತೋಟಗಾರಿಕೆ ಉತ್ಪನ್ನಗಳ ಮೌಲ್ಯವರ್ಧನೆ ಹಾಗೂ ಸಂಸ್ಕರಣೆಗಳಿಗೆ ಸಂಬಂಧಿಸಿದಂತೆ ಕಾಯ್ದಿರಿಸಲಾಗಿದೆ | 0.10 |

ಉಳಿದಂತೆ ಮೇಲೆ ಓದಲಾದ ಆದೇಶದಲ್ಲಿನ ಮಾರ್ಗಸೂಚಿಗಳಲ್ಲಿ ಯಾವುದೇ ಬದಲಾವಣೆಗಳು ಇರುವುದಿಲ್ಲ. ಈ ಆದೇಶವು ತಕ್ಷಣದಿಂದ ಜಾರಿಗೆ ಬಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 612

**ಎಸ್. ರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ
(ತೋಟಗಾರಿಕೆ)
ಕೃಷಿ ಮತ್ತು ತೋಟಗಾರಿಕೆ ಇಲಾಖೆ

**Horticulture Secretariat**
**ADDENDUM**
**NO. AHD 41 HPP 2007, BANGALORE, DATED 23.2.2007**

It is ordered to add in Sl. No. 2 of the Government Order No. AHD 88 HPP 2006, Bangalore dated 23.1.2007 as below;

"The Director of Horticulture will counter sign the grant-in-aid bill prepared by KAPPEC in this regard"

This addendum issues with the concurrence of Finance Department vide its Note No. ಆಇ 412 ವೆಚ್ಚ 4:06 dated 23.2.2007

By Order and in the name of the
Governor of Karnataka

PR- 690

**S. RAJU**
Under Secretary to Government
Horticulture Department

**Subject:** Revalidation of the State Level Administrative approval for implementation of the scheme - "Integrated Farming in coconut holding with CDB assistance (100% CDB) during 2007-08 - reg.

**Read:-** 1. Govt. Order No. AHD 08 HPP 2007 dt: 22.2.2007
2. CDB letter No. F.No. ROB13011/Dev-KarSch/07-08 dt: 11.6.2007

3. DH letter No. DH/PLN/AHO-2/4/2007-08 dt: 22.6.2007
4. Govt. Order No. AHD 53 HPP 2007 dt: 13.7.2007
5. DH letter No. DH/PLN/AHO-2/4/2007-08 dt: 13.7.2007

**Preamble:**

The State Government has accorded sanction for implementation of Coconut Development Board programme on ongoing basis under the scheme "Integrated farming in coconut holdings with CDB assistance (100% CDB)", Head of account 2401-00-108-2-35 with an allocation of Rs. 224.985 lakhs vide Government order read at (4) above.

2) Government had permitted the Director of Horticulture to implement the scheme "Integrated farming in coconut holdings with CDB assistance (100% CDB)" with an additional allocation of Rs. 235.00 lakhs under Head of account 2401-00-108-2-35 during 2006-07 for the following programmes vide Government Order read at (1) above.

| Sl. No. | Programme | Physical | Financial (Rs. in Lakhs) |
|---|---|---|---|
| 1 | Laying out demonstration plots (New) | 800 hectares | 140.00 |
| 2 | Organic manure units | 475 Nos | 95.00 |
| | Total | | 235.00 |

3) Director of Horticulture vide letter read at (3) above has infomed that the scheme could not be implemented during 2006-07 due to non-release of funds from Coconut Development Board.

4) Coconut Development Board (CDB) has requested vide letter read at (2) above to revalidate the Government Order for implementation of "Integrated farming in coconut holdings with CDB assistance (100% CDB)"

5) The Director of Horticulture vide letter read at (5) above has requested the State Government to revalidate State level administrative approval for implementation of the scheme during 2007-08 with a total outlay of Rs. 235.00 lakhs under Head of Account 2401-00-108-2-35. Further, the Director of Horticulture has requested to provide powers to the Director of Horticulture to reallocate the districts programmes as per the requirement of implementing officers.

The proposal of the Director of Horticulture has been examined and it is ordered as below.

**Government Order No. AHD 145 HPP 2007 Bangalore, dated 06.09.2007**

Government is pleased to convey the State level administrative approval to the Director of Horticulture to implement the scheme - Integrated Farming in coconut holdings with CDB assistance (100% CDB) with an additional allocation of Rs. 235.00 lakhs (Rupees Two Hundred and Thirty Five Lakhs only) Head of account 2401-00-108-2-35 during the year 2007-08 for the following programmes.

| Sl. No. | Programme | Physical | Financial (Rs. in Lakhs) |
|---|---|---|---|
| 1 | Laying out demonstration plots (New) | 800 hectares | 140.00 |
| 2 | Organic manure units | 475 Nos | 95.00 |
| | Total | | 235.00 |

The scheme will be implemented as per following guidelines.

1. The Director of Horticulture shall implement the scheme strictly in accordance with the guidelines of Coconut Development Board. He shall also get the releases made from Coconut Development Board. The scheme will be implemented only after the receipt of funds from CDB and release made to the Director of Horticulture by Government.
2. 30%, 16% and 8^% of allocation under demonstration plot, organic manure units shall be given to Women, SC and ST, respectively.
3. Joint Director of Horticulture, plantation crops, Lalbagh, Bangalore-4 (Ph:2657790) will be responsible to report monthly programme wise physical and financial achievement under the Coconut Development Board programmes to the Coconut Development Board and to the Government by 10th of every succeeding month.
4. Karnataka Trasnparency in Public Procurement Act and Right to Information Act shall be followed strictly while implementing the scheme.

This order issues in concurrence with Finance Department vide Note No. ಆಇ 468 ವೆಚ್ಚ 4:2007 dated 27.8.2006

By Order and in the name of the
Governor of Karnataka

PR- 1718

**S. RAJU**
Under Secretary to Government
Horticulture Department

**Subject:** Implementation of Centrally Sponsored Scheme - Macro Management Mode during 2006-07 - Horticulture programmes - reg.

**Read:-** 1. GOI letter No. 12-4/2006 MM-II dated 28.6.2006
2. Agriculture & Horticulture Dept. letter No. AHD 50 AML 2006 dated 28.7.2006
3. Director of Horticulture letter No. DH/PLN/AHO-1/5/2006-07 dated 19.9.2006

**Preamble:**

Government of India has conveyed the approval to revalidate the unspent balance of Rs. 58.06 lakhs under "CSS-Macro Management Mode of Agriculture" for utilization during the year 2006-07 vide letters read at (1) and (2) above.

Director of Horticulture has requested to accord sanction to implement the scheme "CSS-Macro Management Mode" under the Head of Account 2401-00-800-2-23 during the year 2006-07 and has requested to provide Rs. 5.80 lakhs towards 10% State share vide letter read at (3) above. Together the total amount will be Rs. 63.86 lakhs.

The proposal of Director of Horticulture has been examined and hence, the following order.

**Government Order No. AHD 140 HPP 2006, Bangalore, Dated 7.03.2007**

Government is pleased to accord sanction to the Director of Horticulture to implement the scheme "Development of Horticulture under New Macro Management Mode", Head of Account 2401-00-800-2-23 where in Rs. 63.86 lakhs will be provided (Rupees Sixty Three Lakhs and Eightly Six Thousand Only) (GOI share Rs. 58.06 laksh + State share Rs. 5.80 lakhs).

The programme details are as below;

| Sl. No. | Programmes | Amount (Rs. in lakhs) |
|---|---|---|
| 1 | Development of Tropical and Arid Zone Fruits | 14.66 |
| 2 | Integration of Biotechnology in Horticulture development | 25.00 |
| 3 | Assistance to marketing of organic products under organic farming component | 15.00 |
| 4 | Project formulation innovation and evaluation and research and development | 9.20 |
| | Total | 63.86 |

The scheme will be implemented strictly in accordance with the guidelines issued by Government of India, Karnataka Transparency in Public Procurement Act shall be followed strictly at the time of purchases, if any.

The sanctioned amount will be released out of Contingency Funds unders Head of Account 8000-00-251-0-00 Crop Husbandry and later it will be reimbursed to the Fund under Head of Account 2401-00-800-2-23 (Plan) through Supplementary Estimates. Amount cannot be drawn on this Order alone without a separate Order from Finance Department releasing the amount from out of Contingency Fund. At the time of submission of bill to the Treasury for drawl of amount from Contingency Fund by the Drawing Officer, the Treasury shall take action to release the amount only if the bill is appended with this order along with separate Order issued by Finance Department.

This order issues with the concurrence of the Finance Department vide its ಆಇ 644 ವೆಚ್ಚ 4:2006dated 01.3.2007

By Order and in the name of the
Governor of Karnataka

**S. RAJU**
Under Secretary to Government
Horticulture Department

PR- 691

**ಲೋಕೋಪಯೋಗಿ ಸಚಿವಾಲಯ**

**ವಿಷಯ:** ಮಂಡ್ಯ ಜಿಲ್ಲೆಯ ಪಾಂಡವಪುರ ಹಾಗೂ ಕೆ.ಆರ್. ಪೇಟೆ ತಾಲ್ಲೂಕು ವ್ಯಾಪ್ತಿಯಲ್ಲಿ ಬರುವ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:–** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ:ಸಂಕದ: ರಶಾ:ಮೇಲ್ದರ್ಜೆ: ಮಂಡ್ಯ : ಸಇಂ5:8:2006–07, ದಿನಾಂಕ: 23.1.2007

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಮಂಡ್ಯ ಜಿಲ್ಲೆಯ ಪಾಂಡವಪುರ ಹಾಗೂ ಕೆ.ಆರ್. ಪೇಟೆ ತಾಲ್ಲೂಕು ವ್ಯಾಪ್ತಿಯಲ್ಲಿ ಬರುವ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ಗ್ರಾಮೀಣ ರಸ್ತೆಗಳು ದುಸ್ಥಿತಿಯಲ್ಲಿದ್ದು, ವಾಹನಗಳು ಮತ್ತು ಸಾರ್ವಜನಿಕರು ಓಡಾಡಲು ತುಂಬಾ ತೊಂದರೆಯಾಗಿರುತ್ತದೆ. ಆದ್ದರಿಂದ ಈ ಕೆಳಕಂಡ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವುದು ಅವಶ್ಯಕವಾಗಿರುತ್ತದೆ ಎಂದು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ವರದಿ ಮಾಡಿರುತ್ತಾರೆ.

| ಕ್ರಮ ಸಂಖ್ಯೆ | ರಸ್ತೆಯ ವಿವರಗಳು | ಉದ್ದ (ಕಿಮೀ) |
|---|---|---|
| | ಕೆ.ಆರ್. ಪೇಟೆ ತಾಲ್ಲೂಕು : | |
| 1 | ಕಿಕ್ಕೇರಿ–ಶ್ರವಣಬೆಳಗೊಳ ರಸ್ತೆಯಿಂದ ಐಕನಹಳ್ಳಿ ಮಾರ್ಗವಾಗಿ ಎಸ್ಎ ರಸ್ತೆ ಸೇರುವ ರಸ್ತೆಯಿಂದ ಅಂಚೆ ಬೀರನಹಳ್ಳಿ ಮಾರ್ಗವಾಗಿ ಆನೆಗೊಳ ಶ್ರವಣಬೆಳಗೊಳ ಸೇರುವ ರಸ್ತೆ | 3.50 |
| 2 | ಎಸ್.ಎ ರಸ್ತೆಯಿಂದ ಬೊಳಮಾರನಹಳ್ಳಿ ಕೊಪ್ಪಲು ಮಾರ್ಗ ಬೊಳಮಾರನಹಳ್ಳಿಗೆ ರಸ್ತೆ ಸೇರುವ ರಸ್ತೆ | 2.50 |
| | ಪಾಂಡವಪುರ ತಾಲ್ಲೂಕು: | |
| 3 | ಪಾಂಡವಪುರದಿಂದ ಚಂದ್ರೆ, ಸಂಕಹಳ್ಳಿ, ಕೋಡಹಳ್ಳಿ ಹೊಸೂರು ಮಾರ್ಗವಾಗಿ ಶ್ರೀರಂಗಪಟ್ಟಣ ಜೇವರ್ಗಿ ರಸ್ತೆಗೆ ಸೇರುವ ರಸ್ತೆ | 7.70 |

**ಸರ್ಕಾರದ ಆದೇಶ ಸಂಖ್ಯೆ: ಲೋಇ 184 ಸಿಆರ್ಎಂ 2007, ಬೆಂಗಳೂರು, ದಿನಾಂಕ: 09.4.2007**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ, ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ನಿಯಮಾನುಸಾರ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

| ಕ್ರಮ ಸಂಖ್ಯೆ | ರಸ್ತೆಯ ವಿವರಗಳು | ಉದ್ದ (ಕಿಮೀ) |
|---|---|---|
| | ಕೆ.ಆರ್. ಪೇಟೆ ತಾಲ್ಲೂಕು : | |
| 1 | ಕಿಕ್ಕೇರಿ–ಶ್ರವಣಬೆಳಗೊಳ ರಸ್ತೆಯಿಂದ ಐಕನಹಳ್ಳಿ ಮಾರ್ಗವಾಗಿ ಎಸ್ಎ ರಸ್ತೆ ಸೇರುವ ರಸ್ತೆಯಿಂದ ಅಂಚೆ ಬೀರನಹಳ್ಳಿ ಮಾರ್ಗವಾಗಿ ಆನೆಗೊಳ ಶ್ರವಣಬೆಳಗೊಳ ಸೇರುವ ರಸ್ತೆ | 3.50 |
| 2 | ಎಸ್.ಎ ರಸ್ತೆಯಿಂದ ಬೊಳಮಾರನಹಳ್ಳಿ ಕೊಪ್ಪಲು ಮಾರ್ಗ ಬೊಳಮಾರನಹಳ್ಳಿಗೆ ರಸ್ತೆ ಸೇರುವ ರಸ್ತೆ | 2.50 |
| | ಪಾಂಡವಪುರ ತಾಲ್ಲೂಕು: | |
| 3 | ಪಾಂಡವಪುರದಿಂದ ಚಂದ್ರೆ, ಸಂಕಹಳ್ಳಿ, ಕೋಡಹಳ್ಳಿ ಹೊಸೂರು ಮಾರ್ಗವಾಗಿ ಶ್ರೀರಂಗಪಟ್ಟಣ ಜೇವರ್ಗಿ ರಸ್ತೆಗೆ ಸೇರುವ ರಸ್ತೆ | 7.70 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 621

**ಎಸ್.ಜಿ. ನಾರಾಯಣ**
ಸರ್ಕಾರದ ಅಧೀನ ಕಾರ್ಯದರ್ಶಿ
ಲೋಕೋಪಯೋಗಿ ಇಲಾಖೆ (ಸಂಪರ್ಕ)

**ವಿಷಯ:** ಮಂಡ್ಯ ಜಿಲ್ಲೆಯ ಪಾಂಡವಪುರ ತಾಲ್ಲೂಕು ವ್ಯಾಪ್ತಿಯಲ್ಲಿ ಬರುವ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:–** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ:ಸಂಕದ: ರಶಾ:ಮೇಲ್ದರ್ಜೆ: ಮಂಡ್ಯ : ಸಇ5:8:2006–07, ದಿನಾಂಕ: 23.12.2006

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಮಂಡ್ಯ ಜಿಲ್ಲೆಯ ಪಾಂಡವಪುರ ತಾಲ್ಲೂಕು ವ್ಯಾಪ್ತಿಯಲ್ಲಿ ಬರುವ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ಗ್ರಾಮೀಣ ರಸ್ತೆಯು ದುಸ್ಥಿತಿಯಲ್ಲಿದ್ದು, ವಾಹನಗಳು ಮತ್ತು ಸಾರ್ವಜನಿಕರು ಓಡಾಡಲು ತುಂಬಾ ತೊಂದರೆಯಾಗಿರುತ್ತದೆ. ಆದ್ದರಿಂದ ಈ ಕೆಳಕಂಡ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವುದು ಅವಶ್ಯಕವಾಗಿರುತ್ತದೆ ಎಂದು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ವರದಿ ಮಾಡಿರುತ್ತಾರೆ.

| ಕ್ರಮ ಸಂಖ್ಯೆ | ರಸ್ತೆಯ ವಿವರಗಳು | ಉದ್ದ (ಕಿಮೀ) |
|---|---|---|
| 1 | ಬಿ.ಬಿ.ಬಿ.ಟಿ. ರಸ್ತೆಯಿಂದ ಶ್ರೀರಂಗಪಟ್ಟಣ–ಜೇವರ್ಗಿ ರಸ್ತೆಗೆ ಸೇರುವ ರಸ್ತೆ ಮಾರ್ಗ ಕುಂತೀಬೆಟ್ಟ, ಹಿರೇಮರಳ್ಳಿ ಮತ್ತು ಹಿರೇಮರಳ್ಳಿ–ಚಿಕ್ಕಮರಳ್ಳಿ ಕೂಡು ರಸ್ತೆ | 8.10 |
| 2 | ಬಿ.ಬಿ.ಬಿ.ಟಿ. ರಸ್ತೆಯಿಂದ ಬೇವಿನಕುಪ್ಪೆ–ಶಂಭುವಿನಹಳ್ಳಿ ಸೇರುವ ರಸ್ತೆ ಮಾರ್ಗ ಚಿಕ್ಕಮರಳ್ಳಿ, ನುಗ್ಗಹಳ್ಳಿ, ಅನುವಾಳು ಮತ್ತು ನುಗ್ಗಹಳ್ಳಿ–ಕನಗನಮರಡಿ ಕೂಡು ರಸ್ತೆ | 10.50 |
| 3 | ಬಿ.ಬಿ.ಬಿ.ಟಿ. ರಸ್ತೆಯಿಂದ ಶ್ರೀ ಶಿವಶೈಲ ಕ್ಷೇತ್ರಕ್ಕೆ ಪಟ್ಟಸೋಮನಹಳ್ಳಿ ಮುಖಾಂತರ ಸೇರುವ ರಸ್ತೆ | 3.40 |

**ಸರ್ಕಾರದ ಆದೇಶ ಸಂಖ್ಯೆ: ಲೋಇ 185 ಸಿಆರ್‌ಎಂ 2007, ಬೆಂಗಳೂರು, ದಿನಾಂಕ: 09.4.2007**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ, ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ನಿಯಮಾನುಸಾರ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

| ಕ್ರಮ ಸಂಖ್ಯೆ | ರಸ್ತೆಯ ವಿವರಗಳು | ಉದ್ದ (ಕಿಮೀ) |
|---|---|---|
| 1 | ಬಿ.ಬಿ.ಬಿ.ಟಿ. ರಸ್ತೆಯಿಂದ ಶ್ರೀರಂಗಪಟ್ಟಣ-ಜೇವರ್ಗಿ ರಸ್ತೆಗೆ ಸೇರುವ ರಸ್ತೆ ಮಾರ್ಗ ಕುಂತೀಬೆಟ್ಟ, ಹಿರೇಮರಳಿ ಮತ್ತು ಹಿರೇಮರಳಿ-ಚಿಕ್ಕಮರಳಿ ಕೂಡು ರಸ್ತೆ | 8.10 |
| 2 | ಬಿ.ಬಿ.ಬಿ.ಟಿ. ರಸ್ತೆಯಿಂದ ಬೇವಿನಕುಪ್ಪೆ-ಶಂಭುವಿನಹಳ್ಳಿ ಸೇರುವ ರಸ್ತೆ ಮಾರ್ಗ ಚಿಕ್ಕಮರಳಿ, ನುಗ್ಗಹಳ್ಳಿ, ಅನುವಾಳು ಮತ್ತು ನುಗ್ಗಹಳ್ಳಿ-ಕನಗನಮರಡಿ ಕೂಡು ರಸ್ತೆ | 10.50 |
| 3 | ಬಿ.ಬಿ.ಬಿ.ಟಿ. ರಸ್ತೆಯಿಂದ ಶ್ರೀ ಶಿವಶೈಲ ಕ್ಷೇತ್ರಕ್ಕೆ ಪಟ್ಟಸೋಮನಹಳ್ಳಿ ಮುಖಾಂತರ ಸೇರುವ ರಸ್ತೆ | 3.40 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 620

**ಎಸ್.ಜಿ. ನಾರಾಯಣ**
ಸರ್ಕಾರದ ಅಧೀನ ಕಾರ್ಯದರ್ಶಿ
ಲೋಕೋಪಯೋಗಿ ಇಲಾಖೆ (ಸಂಪರ್ಕ)

**ವಿಷಯ:** ಬೆಂಗಳೂರು ಗ್ರಾಮಾಂತರ ಜಿಲ್ಲೆ, ರಾಮನಗರ ತಾಲ್ಲೂಕಿನ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:-** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ:ಸಂಕದ: ಬೆಂ:ನಾಮಫಲಕ:2006-07, ದಿನಾಂಕ: 24.2.2007.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಬೆಂಗಳೂರು ಗ್ರಾಮಾಂತರ ಜಿಲ್ಲೆ, ರಾಮನಗರ ತಾಲ್ಲೂಕಿಗೆ ಸಂಬಂಧಿಸಿದಂತೆ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ಗ್ರಾಮೀಣ ರಸ್ತೆಗಳು ದುಸ್ಥಿತಿಯಲ್ಲಿದ್ದು, ವಾಹನಗಳು ಮತ್ತು ಸಾರ್ವಜನಿಕರು ಓಡಾಡಲು ತುಂಬಾ ತೊಂದರೆಯಾಗಿರುತ್ತದೆ. ಆದ್ದರಿಂದ ಈ ಕೆಳಕಂಡ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವುದು ಅವಶ್ಯಕವಾಗಿರುತ್ತದೆ ಎಂದು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ವರದಿ ಮಾಡಿರುತ್ತಾರೆ.

| ಕ್ರಮ ಸಂಖ್ಯೆ | ರಸ್ತೆಯ ವಿವರಗಳು | ಉದ್ದ (ಕಿಮೀ) |
|---|---|---|
| 1 | ಬಿಡದಿ ಮುದುವಾಡಿ ರಸ್ತೆಯಿಂದ ರಾಮನಹಳ್ಳಿವರೆಗೆ ರಸ್ತೆ ಅಭಿವೃದ್ಧಿ | 2.50 |
| 2 | ಬಾಣಂದೂರಿನಿಂದ ಅಂಗರಹಳ್ಳಿ ಮಾರ್ಗ ಹೆಗ್ಗಡಗೆರೆ ಇಟ್ಟಮಡು ರಸ್ತೆವರೆಗೆ ರಸ್ತೆ ಅಭಿವೃದ್ಧಿ | 2.50 |
| 3 | ಬಿಡದಿ-ಮುದುವಾಡಿ ರಸ್ತೆಯಿಂದ ಕರಿಯಪ್ಪನದೊಡ್ಡಿ ಹಲಸಿನಮರದದೊಡ್ಡಿ ಗೊಲ್ಲಹಳ್ಳಿ ಮಾರ್ಗ ಬಾಣಂದೂರು ರಸ್ತೆವರೆಗೆ ರಸ್ತೆ ಅಭಿವೃದ್ಧಿ | 3.00 |
| 4 | ಕಾಕರಾಮನಹಳ್ಳಿ-ಅವರಗೆರೆ ರಸ್ತೆಯಿಂದ ಸಿದ್ದಾಬೋವಿಪಾಳ್ಯ ಮಾರ್ಗ ಮುತ್ತುರಾಯನಗುಡಿ ಪಾಳ್ಯವರೆಗೆ ರಸ್ತೆ | 3.00 |
| 5 | ಹುಚ್ಚಮ್ಮನದೊಡ್ಡಿಯಿಂದ ಬೆಣ್ಣಳ್ಳಿ ಹೆಬ್ಬಕೋಡಿ ಮುಖಾಂತರ ತುಂಬೇನಹಳ್ಳಿ ವರೆಗೆ ರಸ್ತೆ | 4.00 |
| 6 | ರಾಮನಗರ ಪಟ್ಟಣದಲ್ಲಿ ಮುಖ್ಯ ರಸ್ತೆಯಿಂದ ರೈಲ್ವೆ ನಿಲ್ದಾಣ ಸೇರುವ ರಸ್ತೆ ಮಾರ್ಗ ಸರ್ಕಾರಿ ಆಸ್ಪತ್ರೆ | 1.50 |
| 7 | ಬಿಳಗುಂಬ ರಸ್ತೆಯಿಂದ ಪೇಟೆ ಕುರುಬಳ್ಳಿವರೆಗೆ ರಸ್ತೆ | 3.00 |
| 8 | ಅರ್ಚಕರಹಳ್ಳಿಯಿಂದ ದೊಡ್ಡಮಣ್ಣುಗುಡ್ಡೆ ವಡ್ಡರದೊಡ್ಡಿ ವರೆಗೆ ರಸ್ತೆಯ ಮಾರ್ಗ ಕನ್ನಮಂಗಲದೊಡ್ಡಿ ವಡ್ಡರದೊಡ್ಡಿ | 2.50 |
| 9 | ಮಾಗಡಿ-ರಾಮನಗರ ರಸ್ತೆಯಿಂದ ಹರೀಸಂದ್ರ ವರೆಗೆ ರಸ್ತೆ | 3.00 |
| 10 | ಮಾಗಡಿ-ರಾಮನಗರ ರಸ್ತೆಯಿಂದ ಚಿಕ್ಕೆಗೌಡನದೊಡ್ಡಿ ವರೆಗೆ ರಸ್ತೆ | 3.00 |
| 11 | ಬಿ.ಎಂ. ರಸ್ತೆಯಿಂದ (ರಾಮದೇವರ ಪಾದ) ರಾಮದೇವರ ಬೆಟ್ಟ ರಸ್ತೆ | 2.50 |
| 12 | ಬಿ.ಎಂ. ರಸ್ತೆಯಿಂದ ಮಾದಾಪುರ, ಬೂರುಗಮರದ ದೊಡ್ಡಿ ಮುಖಾಂತರ ಸುಗ್ಗನಹಳ್ಳಿ ಸೇರುವ ರಸ್ತೆ | 10.00 |

| | | |
|---|---|---|
| 13 | ಬೆಜ್ಜಗರಹಳ್ಳಿ ಕಟ್ಟೆಯಿಂದ ಹನುಮಂತೇಗೌಡನದೊಡ್ಡಿ ಮುಖಾಂತರ ಹರೀಸಂದ್ರ ಸೇರುವ ರಸ್ತೆ | 2.50 |
| 14 | ತೆಂಗಿನಕಲ್ಲು ಅಡ್ಡರಸ್ತೆಯಿಂದ, ದೇವರದೊಡ್ಡಿ, ಕುರುಬರಹಳ್ಳಿ ಮಾರ್ಗ ಸಾಹುಕರದೊಡ್ಡಿ ವರೆಗೆ ರಸ್ತೆ | 3.50 |
| 15 | ಹುಣಸನಹಳ್ಳಿ–ಹುಲಿಕೆರೆ ರಸ್ತೆಯಿಂದ ವಡ್ಡರಹಳ್ಳಿ ಮುಖಾಂತರ ಗುಲ್ಲರದೊಡ್ಡಿ ವರೆಗೆ ರಸ್ತೆ ಅಭಿವೃದ್ಧಿ | 2.00 |
| 16 | ಬನ್ನಿಕುಪ್ಪೆ (ಕೈ) ಯಿಂದ ಚೌಡಯ್ಯನದೊಡ್ಡಿ ಮುಖಾಂತರ ವಡ್ಡರದೊಡ್ಡಿವರೆಗೆ ರಸ್ತೆ ಅಭಿವೃದ್ಧಿ | 3.00 |
| 17 | ಬ್ಯಾಲಕುಳೆದೊಡ್ಡಿಯಿಂದ – ಕೀರನ್ ಕಲ್ ದೊಡ್ಡಿ ಅಲೇಮರದದೊಡ್ಡಿ ಮುಖಾಂತರ ವಿಭೂತಿಕೆರೆ ರಸ್ತೆಗೆ ಸೇರುವ ರಸ್ತೆ | 3.00 |
| 18 | ಕವಣಾಪುರ ಎಸ್.ಆರ್.ಎಸ್. ಬೆಟ್ಟ ರಸ್ತೆಯಿಂದ ನಂಜಾಪುರ ಹೊಸದೊಡ್ಡಿ ಸೇರುವ ರಸ್ತೆ | 4.00 |
| 19 | ಬಿಡದಿ–ಮುದುವಾಡಿ ರಸ್ತೆಯಿಂದ ನಿಂಗಯ್ಯನಕೆರೆಕೋಡಿ ಮುಖಾಂತರ ಹುಣಸನಹಳ್ಳಿ – ಉರುಗಹಳ್ಳಿ ಸೇರುವ ರಸ್ತೆ | 3.00 |
| 20 | ಉರಗಹಳ್ಳಿ ಕೆರೆಕೋಡಿಯಿಂದ ಭಕ್ತಿಪುರ ಮಾರ್ಗವಾಗಿ ಬಿಡದಿ ಮುದುವಾಡಿ ರಸ್ತೆವರೆಗೆ ರಸ್ತೆ ಅಭಿವೃದ್ಧಿ | 2.00 |
| 21 | ಕೆಂಚಗರಹಳ್ಳಿ, ಕೆಂಚಗರಹಳ್ಳಿ ಕಾಲೋನಿ ಮುಖಾಂತರ ಕೆಂಪನಹಳ್ಳಿ ಬಿ.ಎಂ.ರಸ್ತೆ ಸೇರುವ ರಸ್ತೆ | 4.00 |
| 22 | ಹುಣಸನಹಳ್ಳಿ–ಉರಗಹಳ್ಳಿ ರಸ್ತೆಯಿಂದ ವಿಸ್ತಾರ ಇಂಡಿಯಾ ಮುಖಾಂತರ ಹುಣಸನಹಳ್ಳಿ–ಉರಗಹಳ್ಳಿ ಸೇರುವ ರಸ್ತೆ | 4.00 |
| 23 | ರಾಮನಗರ ಜಾಲಮಂಗಲ ರಸ್ತೆಯಿಂದ ಡಣಾಯಕನಪುರ ಕೃಷ್ಣರಾಜಪುರದ ವರೆಗೆ ರಸ್ತೆ ಅಭಿವೃದ್ಧಿ | 2.50 |
| 24 | ಮೆಳೆಹಳ್ಳಿ ಅಂಕನಹಳ್ಳಿ ರಸ್ತೆಯಿಂದ ಹುಣಸೇದೊಡ್ಡಿ ಮುಖಾಂತರ ಚನ್ನೇನಹಳ್ಳಿ ಸೇರುವ ರಸ್ತೆ | 2.30 |
| 25 | ಅನುಮಾನಹಳ್ಳಿಯಿಂದ ಶ್ಯಾನುಭೋಗನಹಳ್ಳಿ ವಡ್ಡರದೊಡ್ಡಿ ವರೆಗೆ ರಸ್ತೆ ಅಭಿವೃದ್ಧಿ | 2.50 |
| 26 | ಮುನಿಯಪ್ಪನದೊಡ್ಡಿಯಿಂದ ಗಡಾಲಯ್ಯನದೊಡ್ಡಿ ಚಿಕ್ಕಕೆಂಪಯ್ಯನದೊಡ್ಡಿ ಮಾದೇಗೌಡನದೊಡ್ಡಿ ಕೆಂಪವಡೇರಹಳ್ಳಿ ಮುಖಾಂತರ ನೆರಲೆಮರದ ಗೇಟ್ (ಲಕ್ಷ್ಮೀಪುರ ಮುಖ್ಯರಸ್ತೆ) ವರೆಗೆ ರಸ್ತೆ | 4.00 |
| 27 | ದೊಡ್ಡಗಂಗವಾಡಿಯಿಂದ ಕ್ಯಾಸಾಪುರ ಸೇರುವ ರಸ್ತೆ | 5.00 |
| 28 | ಚಿಕ್ಕಗಂಗವಾಡಿಯಿಂದ ವಿರೂಪಸಂದ್ರ ಸೇರುವ ರಸ್ತೆ (ಮಾರ್ಗ ಇರುಳಿಗ್ವರದೊಡ್ಡಿ) | 3.50 |
| | ಒಟ್ಟು ಉದ್ದ | 91.30 |

**ಸರ್ಕಾರದ ಆದೇಶ ಸಂಖ್ಯೆ: ಲೋಇ 370 ಸಿಆರ್‌ಎಂ 2006, ಬೆಂಗಳೂರು, ದಿನಾಂಕ: 05.4.2007**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡ 28 ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ, ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ನಿಯಮಾನುಸಾರ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

| ಕ್ರಮ ಸಂಖ್ಯೆ | ರಸ್ತೆಯ ವಿವರಗಳು | ಉದ್ದ (ಕಿಮೀ) |
|---|---|---|
| 1 | ಬಿಡದಿ ಮುದುವಾಡಿ ರಸ್ತೆಯಿಂದ ರಾಮನಹಳ್ಳಿವರೆಗೆ ರಸ್ತೆ ಅಭಿವೃದ್ಧಿ | 2.50 |
| 2 | ಬಾಣಂದೂರಿನಿಂದ ಅಂಗರಹಳ್ಳಿ ಮಾರ್ಗ ಹೆಗ್ಗಡಗೆರೆ ಇಟ್ಟಮಡು ರಸ್ತೆವರೆಗೆ ರಸ್ತೆ ಅಭಿವೃದ್ಧಿ | 2.50 |
| 3 | ಬಿಡದಿ–ಮುದುವಾಡಿ ರಸ್ತೆಯಿಂದ ಕರಿಯಪ್ಪನದೊಡ್ಡಿ ಹಲಸಿನಮರದದೊಡ್ಡಿ ಗೊಲ್ಲಹಳ್ಳಿ ಮಾರ್ಗ ಬಾಣಂದೂರು ರಸ್ತೆವರೆಗೆ ರಸ್ತೆ ಅಭಿವೃದ್ಧಿ | 3.00 |
| 4 | ಕಾಕರಾಮನಹಳ್ಳಿ–ಅವರಗೆರೆ ರಸ್ತೆಯಿಂದ ಸಿದ್ದಾಬೋವಿಪಾಳ್ಯ ಮಾರ್ಗ ಮುತ್ತುರಾಯನಗುಡಿ ಪಾಳ್ಯವರೆಗೆ ರಸ್ತೆ | 3.00 |
| 5 | ಹುಚ್ಚಮ್ಮನದೊಡ್ಡಿಯಿಂದ ಬೆಣ್ಣಳ್ಳಿ ಹೆಬ್ಬಕೋಡಿ ಮುಖಾಂತರ ತುಂಬೇನಹಳ್ಳಿ ವರೆಗೆ ರಸ್ತೆ | 4.00 |
| 6 | ರಾಮನಗರ ಪಟ್ಟಣದಲ್ಲಿ ಮುಖ್ಯ ರಸ್ತೆಯಿಂದ ರೈಲ್ವೆ ನಿಲ್ದಾಣ ಸೇರುವ ರಸ್ತೆ ಮಾರ್ಗ ಸರ್ಕಾರಿ ಆಸ್ಪತ್ರೆ | 1.50 |

| | | |
|---|---|---|
| 7 | ಬಿಳಗುಂಬ ರಸ್ತೆಯಿಂದ ಪೇಟೆ ಕುರುಬಳ್ಳಿವರೆಗೆ ರಸ್ತೆ | 3.00 |
| 8 | ಅರ್ಚಕರಹಳ್ಳಿಯಿಂದ ದೊಡ್ಡಮಣ್ಣುಗುಡ್ಡೆ ವಡ್ಡರದೊಡ್ಡಿ ವರೆಗೆ ರಸ್ತೆಯ ಮಾರ್ಗ ಕನ್ನಮಂಗಲದೊಡ್ಡಿ ವಡ್ಡರದೊಡ್ಡಿ | 2.50 |
| 9 | ಮಾಗಡಿ–ರಾಮನಗರ ರಸ್ತೆಯಿಂದ ಹರೀಸಂದ್ರ ವರೆಗೆ ರಸ್ತೆ | 3.00 |
| 10 | ಮಾಗಡಿ–ರಾಮನಗರ ರಸ್ತೆಯಿಂದ ಚಿಕ್ಕೆಗೌಡನದೊಡ್ಡಿ ವರೆಗೆ ರಸ್ತೆ | 3.00 |
| 11 | ಬಿ.ಎಂ. ರಸ್ತೆಯಿಂದ (ರಾಮದೇವರ ಪಾದ) ರಾಮದೇವರ ಬೆಟ್ಟ ರಸ್ತೆ | 2.50 |
| 12 | ಬಿ.ಎಂ. ರಸ್ತೆಯಿಂದ ಮಾದಾಪುರ, ಬೂರುಗಮರದ ದೊಡ್ಡಿ ಮುಖಾಂತರ ಸುಗ್ಗನಹಳ್ಳಿ ಸೇರುವ ರಸ್ತೆ | 10.00 |
| 13 | ಬೆಜ್ಜಗರಹಳ್ಳಿ ಕಟ್ಟೆಯಿಂದ ಹನುಮಂತೇಗೌಡನದೊಡ್ಡಿ ಮುಖಾಂತರ ಹರೀಸಂದ್ರ ಸೇರುವ ರಸ್ತೆ | 2.50 |
| 14 | ತೆಂಗಿನಕಲ್ಲು ಅಡ್ಡರಸ್ತೆಯಿಂದ, ದೇವರದೊಡ್ಡಿ, ಕುರುಬರಹಳ್ಳಿ ಮಾರ್ಗ ಸಾಹುಕರದೊಡ್ಡಿ ವರೆಗೆ ರಸ್ತೆ | 3.50 |
| 15 | ಹುಣಸನಹಳ್ಳಿ–ಹುಲಿಕೆರೆ ರಸ್ತೆಯಿಂದ ವಡ್ಡರಹಳ್ಳಿ ಮುಖಾಂತರ ಗುಲ್ಲರದೊಡ್ಡಿ ವರೆಗೆ ರಸ್ತೆ ಅಭಿವೃದ್ಧಿ | 2.00 |
| 16 | ಬನ್ನಿಕುಪ್ಪೆ (ಕೈ) ಯಿಂದ ಚೌಡಯ್ಯನದೊಡ್ಡಿ ಮುಖಾಂತರ ವಡ್ಡರದೊಡ್ಡಿವರೆಗೆ ರಸ್ತೆ ಅಭಿವೃದ್ಧಿ | 3.00 |
| 17 | ಬ್ಯಾಲಕುಳೆದೊಡ್ಡಿಯಿಂದ – ಕೀರನ್ ಕಲ್ ದೊಡ್ಡಿ ಅಲೇಮರದದೊಡ್ಡಿ ಮುಖಾಂತರ ವಿಭೂತಿಕೆರೆ ರಸ್ತೆ ಸೇರುವ ರಸ್ತೆ | 3.00 |
| 18 | ಕವಣಾಪುರ ಎಸ್.ಆರ್.ಎಸ್. ಬೆಟ್ಟ ರಸ್ತೆಯಿಂದ ನಂಜಾಪುರ ಹೊಸದೊಡ್ಡಿ ಸೇರುವ ರಸ್ತೆ | 4.00 |
| 19 | ಬಿಡದಿ–ಮುದುವಾಡಿ ರಸ್ತೆಯಿಂದ ನಿಂಗಯ್ಯನಕೆರೆಕೋಡಿ ಮುಖಾಂತರ ಹುಣಸನಹಳ್ಳಿ – ಉರುಗಹಳ್ಳಿ ಸೇರುವ ರಸ್ತೆ | 3.00 |
| 20 | ಉರಗಹಳ್ಳಿ ಕೆರೆಕೋಡಿಯಿಂದ ಭಕ್ತಿಪುರ ಮಾರ್ಗವಾಗಿ ಬಿಡದಿ ಮುದುವಾಡಿ ರಸ್ತೆವರೆಗೆ ರಸ್ತೆ ಅಭಿವೃದ್ಧಿ | 2.00 |
| 21 | ಕೆಂಚಗರಹಳ್ಳಿ, ಕೆಂಚಗರಹಳ್ಳಿ ಕಾಲೋನಿ ಮುಖಾಂತರ ಕೆಂಪನಹಳ್ಳಿ ಬಿ.ಎಂ.ರಸ್ತೆ ಸೇರುವ ರಸ್ತೆ | 4.00 |
| 22 | ಹುಣಸನಹಳ್ಳಿ–ಉರಗಹಳ್ಳಿ ರಸ್ತೆಯಿಂದ ವಿಸ್ತಾರ ಇಂಡಿಯಾ ಮುಖಾಂತರ ಹುಣಸನಹಳ್ಳಿ–ಉರಗಹಳ್ಳಿ ಸೇರುವ ರಸ್ತೆ | 4.00 |
| 23 | ರಾಮನಗರ ಜಾಲಮಂಗಲ ರಸ್ತೆಯಿಂದ ಡಣಾಯಕನಪುರ ಕೃಷ್ಣರಾಜಪುರದ ವರೆಗೆ ರಸ್ತೆ ಅಭಿವೃದ್ಧಿ | 2.50 |
| 24 | ಮೆಳೆಹಳ್ಳಿ ಅಂಕನಹಳ್ಳಿ ರಸ್ತೆಯಿಂದ ಹುಣಸೇದೊಡ್ಡಿ ಮುಖಾಂತರ ಚನ್ನೇನಹಳ್ಳಿ ಸೇರುವ ರಸ್ತೆ | 2.30 |
| 25 | ಅನುಮಾನಹಳ್ಳಿಯಿಂದ ಶ್ಯಾನುಭೋಗನಹಳ್ಳಿ ವಡ್ಡರದೊಡ್ಡಿ ವರೆಗೆ ರಸ್ತೆ ಅಭಿವೃದ್ಧಿ | 2.50 |
| 26 | ಮುನಿಯಪ್ಪನದೊಡ್ಡಿಯಿಂದ ಗಡಾಲಯ್ಯನದೊಡ್ಡಿ ಚಿಕ್ಕಕೆಂಪಯ್ಯನದೊಡ್ಡಿ ಮಾದೇಗೌಡನದೊಡ್ಡಿ ಕೆಂಪವಡೇರಹಳ್ಳಿ ಮುಖಾಂತರ ನೆರಲೆಮರದ ಗೇಟ್ (ಲಕ್ಷ್ಮೀಪುರ ಮುಖ್ಯರಸ್ತೆ) ವರೆಗೆ ರಸ್ತೆ | 4.00 |
| 27 | ದೊಡ್ಡಗಂಗವಾಡಿಯಿಂದ ಕ್ಯಾಸಾಪುರ ಸೇರುವ ರಸ್ತೆ | 5.00 |
| 28 | ಚಿಕ್ಕಗಂಗವಾಡಿಯಿಂದ ವಿರೂಪಸಂದ್ರ ಸೇರುವ ರಸ್ತೆ (ಮಾರ್ಗ ಇರುಳಿಗ್ಗರದೊಡ್ಡಿ) | 3.50 |
| | ಒಟ್ಟು ಉದ್ದ | 91.30 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 634

**ಎಸ್.ಜಿ. ನಾರಾಯಣ**
ಸರ್ಕಾರದ ಅಧೀನ ಕಾರ್ಯದರ್ಶಿ
ಲೋಕೋಪಯೋಗಿ ಇಲಾಖೆ (ಸಂಪರ್ಕ)

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಕೆ.ಬಿ. ಮುಲ್ಲಾ, ಎ.ಸಿ.ಪಿ, ಶ್ರೀ ಚಿಕ್ಕಸ್ವಾಮಿ, ಪಿ.ಎಸ್.ಐ. ಮತ್ತು ಶ್ರೀ ಶ್ರೀನಿವಾಸ್, ಪಿ.ಸಿ.–5906 ಅಶೋಕನಗರ ಪೊಲೀಸ್ ಠಾಣಾ ವಿರುದ್ಧ ಕೈಗೊಂಡ ಶಿಸ್ತು ಕ್ರಮದ ಬಗ್ಗೆ ಅಂತಿಮ ಆದೇಶ ಹೊರಡಿಸುವ ಕುರಿತು.

**ಓದಲಾಗಿದೆ:–** 1. ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ: ಸಿಬಿ (5)50/2002–03 ದಿನಾಂಕ: 31.3.2003

2. ಸರ್ಕಾರದ ಆದೇಶ ಸಂಖ್ಯೆ: ಒಇ 134 ಪೊಸಿಪ 2003 ದಿನಾಂಕ: 01.10.2003 ಮತ್ತು 24.12.2004

3. ರಿಟ್ ಅರ್ಜಿ ಸಂಖ್ಯೆ: 21695/2005 ದಿನಾಂಕ: 22.3.2006 ತೀರ್ಪು.

**ಪ್ರಸ್ತಾವನೆ:**

ಅಶೋಕ ನಗರ ಪೊಲೀಸ್ ಠಾಣಾ ಮೊಕದ್ದಮೆ ಸಂಖ್ಯೆ: 807/99 ಕಲಂ 7(2) ಜೊತೆಗೆ 14 ವಿದೇಶಿ ಕಾಯ್ದೆ ಪ್ರಕರಣದ ಫಿರ್ಯಾದುದಾರರಾದ ಶ್ರೀ ಚಿಕ್ಕಸ್ವಾಮಿ, ಪಿ.ಎಸ್.ಐ. ಪಿ.ಐ. ಪಿ.ಆರ್.ಸಿ. ಪ್ರಧಾನ ಕಛೇರಿ, ಬೆಂಗಳೂರು ಮತ್ತು ತನಿಖಾಧಿಕಾರಿಗಳಾದ ಶ್ರೀ ಕೆ.ಬಿ. ಮುಲ್ಲಾ, ಸಹಾಯಕ ಪೊಲೀಸ್ ಕಮೀಷನರ್ ವಿಶೇಷ ಶಾಖೆ ಹಾಲಿ ಡಿವೈ.ಎಸ್.ಪಿ. ಗೋಕಾಕ್ ಉಪ ವಿಭಾಗ, ಬೆಳಗಾವಿ ಜಿಲ್ಲೆ ಮತ್ತು ಸಾಕ್ಷದಾರರಾದ ಶ್ರೀ ಶ್ರೀನಿವಾಸ್, ಪಿ.ಸಿ. 5906 ಅಶೋಕನಗರ ಪೊಲೀಸ್ ಠಾಣೆ, ಬೆಂಗಳೂರು ನಗರ ರವರುಗಳು ಪೊಲೀಸ್ ಪ್ರಕರಣದಲ್ಲಿ ಆರೋಪಿತರ ವಾಸ್ತವ್ಯದ ಬಗ್ಗೆ ನ್ಯಾಯಾಲಯದ ವಿಚಾರಣೆಗೆ ಹಾಜರಾಗಿ ಸಾಕ್ಷ್ಯಾಧಾರಗಳನ್ನು ಒದಗಿಸುವಲ್ಲಿ ವಿಫಲರಾದ ಕಾರಣ ಸದರಿ ಪ್ರಕರಣದ ಆಪಾದಿತರು ಖುಲಾಸೆಯಾಗಿರುತ್ತಾರೆ. ಸದರಿ ಅಧಿಕಾರಿಗಳಿಗೆ ನ್ಯಾಯಾಲಯ ಹಲವಾರು ಬಾರಿ ಸಮನ್ಸ್/ವಾರೆಂಟ್‌ಗಳನ್ನು ನೀಡಿ ಪ್ರಕರಣಕ್ಕೆ ಸಂಬಂಧಿಸಿದಂತೆ ಸಾಕ್ಷಿ ನುಡಿಯಲು ದಾಖಲೆಗಳನ್ನು ಒದಗಿಸದೆ ಕರ್ತವ್ಯ ಲೋಪವೆಸಗಿರುವರೆನ್ನುವ ಆರೋಪಗಳು, ಎ.ಸಿ.ಪಿ. ಹಲಸೂರು ಗೇಟ್ ವಿಭಾಗ ರವರ ಪೂರ್ವಬಾವಿ ವಿಚಾರಣೆಯಿಂದ ಮೇಲ್ನೋಟಕ್ಕೆ ಸಾಬಿತಾಗಿರುತ್ತದೆ. ಸದರಿ ಅಧಿಕಾರಿಗಳು ತೋರಿರುವ ಕರ್ತವ್ಯ ನಿರ್ಲಕ್ಷತೆ, ಉದಾಸೀನತೆ ಹಾಗೂ ಘೋರ ಮುರ್ನಡತೆಯ ಆರೋಪಗಳ ವಿರುದ್ಧ ಇಲಾಖಾ ಶಿಸ್ತು ಕ್ರಮ ತೆಗೆದುಕೊಳ್ಳುವಂತೆ ಪೊಲೀಸ್ ಕಮೀಷನರ್, ಬೆಂಗಳೂರು ನಗರ ರವರು ಕೋರಿರುತ್ತಾರೆ.

ಈ ಪ್ರಕರಣದಲ್ಲಿ ಕರ್ತವ್ಯ ಲೋಪವೆಸಗಿರುವ ಪೊಲೀಸ್ ಅಧಿಕಾರಿಗಳಲ್ಲಿ ಶ್ರೀ ಕೆ.ಬಿ. ಮುಲ್ಲಾ ಎಸ್.ಪಿ. ರವರು ದಿನಾಂಕ: 28.2.2003ರಂದು ಸೇವೆಯಿಂದ ವಯೋನಿವೃತ್ತಿ ಹೊಂದಿರುತ್ತಾರೆ. ಕೆ.ಸಿ.ಎಸ್.ಆರ್. ನಿಯಮ 214ರ ಪ್ರಕಾರ ನಿವೃತ್ತ ಪೊಲೀಸ್ ಅಧಿಕಾರಿ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಸರ್ಕಾರವೇ ಸಕ್ಷ ಪ್ರಾಧಿಕಾರವಾಗಿರುತ್ತದೆ ಎಂದು ಆಪಾದಿತರು ವಿರುದ್ಧ ಕೆ.ಎಸ್.ಪಿ. ಡಿ.ಪಿ. ನಿಯಮಗಳು, 1965ರ ನಿಯಮ 6 ಮತ್ತು 8ರನ್ವಯ ಜಂಟಿ ಇಲಾಖಾ ವಿಚಾರಣೆ ನಡೆಸುವಂತೆ ಮೇಲೆ ಓದಲಾದ (1)ರಲ್ಲಿ ಡಿಜಿ ಮತ್ತು ಐಜಿಪಿ ರವರು ಸರ್ಕಾರಕ್ಕೆ ಕೋರಿರುತ್ತಾರೆ. ಇಲಾಖಾ ವಿಚಾರಣೆಯನ್ನು ಆದೇಶಿಸಿ ಡಿ.ಐ.ಜಿ.ಪಿ. ನೇಮಕಾತಿ ಮತ್ತು ತರಬೇತಿ ರವರನ್ನು ವಿಚಾರಣಾಧಿಕಾರಿಯವರನ್ನಾಗಿ ನೇಮಿಸಿ ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶವನ್ನು ಹೊರಡಿಸಲಾಗಿದೆ.

ಈ ಇಲಾಖಾ ವಿಚಾರಣೆಯ ವಿರುದ್ಧ ಶ್ರೀ ಕೆ.ಬಿ. ಮುಲ್ಲಾ ರವರು ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ:21695/2005ನ್ನು ಸಲ್ಲಿಸಿದ್ದು, ನ್ಯಾಯಾಲಯವು ಪರಿಶೀಲಿಸಿ ದಿನಾಂಕ: 22.3.2006ರಂದು ತೀರ್ಪು ನೀಡಿದೆ. ಅರ್ಜಿದಾರರು (ವಾದಿ) ನ್ಯಾಯಾಲಯದಲ್ಲಿ ವಿಚಾರಣೆ ನಡೆಸುವಾಗ ನ್ಯಾಯಾಲಯಕ್ಕೆ ಬಂದು ಹಾಜರಾಗಿರುವುದಿಲ್ಲವೆಂದು ಮತ್ತು ಫಿರ್ಯಾದುದಾರರಿಗೆ ಸಕಾಲಕ್ಕೆ ವಾರೆಂಟ್ ಹೊರಡಿಸಿದ ಕಾರಣ ಶ್ರೀ ಕೆ.ಬಿ. ಮುಲ್ಲಾ ಇವರಿಗೆ ಬೆಳಗಾಂನಿಂದ ಗೋಕಾಕ್ ಉಪ ವಿಭಾಗಕ್ಕೆ ವರ್ಗಾವಣೆ ಆಗಿದ್ದು ಈ ಎರಡು ಕಾರಣಗಳ ಮೇಲೆ ನ್ಯಾಯಾಲಯವು ತೀರ್ಪು ನೀಡಿ ಅರ್ಜಿ ವಜಾ ಮಾಡಿದೆ. ಸದರಿ ತೀರ್ಪಿನ ಪ್ರತಿಯನ್ನು ಲಗತ್ತಿಸಿ ತಮಗೆ ಈ ವಿಚಾರಣೆಯಿಂದ ಬಿಡುಗಡೆ ಮಾಡುವಂತೆ ಕೋರಿ ಸಲ್ಲಿಸಿದ ಶ್ರೀ ಕೆ.ಬಿ. ಮುಲ್ಲಾ ರವರ ಮನವಿಯನ್ನು, ಡಿಜಿ ರವರು ಸರ್ಕಾರಕ್ಕೆ ಕಳುಹಿಸಿಕೊಟ್ಟಿರುತ್ತಾರೆ. ಡಿ.ಜಿ.ಪಿ. ರವರು ಮಾನ್ಯ ನ್ಯಾಯಲಯವು ಟ್ರಯಲ್ ನ್ಯಾಯಾಲಯದ ಷರಾಗಳನ್ನು ತಳ್ಳಿಹಾಕಿದೆಯೆಂದು ವರದಿ ಮಾಡಿರುತ್ತಾರೆ.

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 134 ಪೊಸಿಪ 2003 ಬೆಂಗಳೂರು, ದಿನಾಂಕ: 02.04.2007**

ಮಾನ್ಯ ಉಚ್ಚ ನ್ಯಾಯಾಲಯ ರಿಟ್ ಅರ್ಜಿ ಸಂಖ್ಯೆ: 21695/2005ರಲ್ಲಿ ದಿನಾಂಕ: 22.03.2006ರ ತೀರ್ಪಿನಲ್ಲಿ ಟ್ರಯಲ್ ನ್ಯಾಯಾಲಯದ ಷರಾಗಳನ್ನು ತಳ್ಳಿಹಾಕಿ ನೀಡಿರುವ ತೀರ್ಪಿನನ್ವಯ ಹಾಗೂ ಇಲಾಖಾ ವಿಚಾರಣಾಧಿಕಾರಿ, ಡಿ.ಐ.ಜಿ.ಪಿ. (ನೇಮಕಾತಿ ಮತ್ತು ತರಬೇತಿ) ರವರು ನೀಡಿರುವ ಅಭಿಪ್ರಾಯದಂತೆ ಸರ್ಕಾರದ ಆದೇಶ ಸಂಖ್ಯೆ: ಒಇ 134 ಪೊನಿಪ 2003 ದಿನಾಂಕ: 01.10.2003ರ ಆದೇಶವನ್ನು ಭಾಗಶಃ ಮಾರ್ಪಡಿಸಿ, ಶ್ರೀ ಕೆ.ಬಿ. ಮುಲ್ಲಾ ಹಿಂದಿನ ಡಿವೈ.ಎಸ್.ಪಿ. ಹಾಲಿ ನಿವೃತ್ತ ಎಸ್.ಪಿ. ಇವರ ಹೆಸರನ್ನು ಮಾತ್ರ ಇಲಾಖಾ ವಿಚಾರಣೆಯಿಂದ ಕೈಬಿಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 630

**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ
(ಪೊಲೀಸ್ ಸೇವೆಗಳು)

**ತಿದ್ದುಪಡಿ**

**ಸಂಖ್ಯೆ: ಒಇ 102 ಪಿಸಿಇ 2007, ಬೆಂಗಳೂರು, ದಿನಾಂಕ: 30.03.2007**

ದಿನಾಂಕ 27.12.2006ರ ಸರ್ಕಾರದ ಆದೇಶ ಸಂ. ಒಇ 792 ಪಿಪಿಇ 2005 ಆದೇಶದ ಭಾಗದ ಮೂರನೇ ಸಾಲಿನಲ್ಲಿ "ರೂ.6000–11,200"ಕ್ಕೆ ಬದಲಾಗಿ "ರೂ. 6,000–11,400" ಎಂದು ಮತ್ತು ನಾಲ್ಕನೇ ಸಾಲಿನಲ್ಲಿ "ರೂ.8,800 ರಿಂದ ರೂ.8,600"ರ ಬದಲಾಗಿ "ರೂ.9,060 ರಿಂದ ರೂ.8,800" ಎಂದು ಓದಿಕೊಳ್ಳುವುದು. ಉಳಿದಂತೆ ದಿನಾಂಕ 27.12.2006ರ ಸರ್ಕಾರದ ಆದೇಶದಲ್ಲಿ ಯಾವುದೇ ಬದಲಾವಣೆಗಳು ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

**ಆರ್. ನಿಸಾರ್ ಅಹಮದ್**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ
(ಕಾ. ಮತ್ತು ಸು. ಕಾಫಿಪೋಸ ಮತ್ತು ಅಭಿಯೋಗಗಳು)

ಪಿ.ಆರ್. 652

**ತಿದ್ದುಪಡಿ**

**ಸಂಖ್ಯೆ: ಒಇ 164 ಪಿಪಿಇ 2007, ಬೆಂಗಳೂರು, ದಿನಾಂಕ: 07.04.2007**

ದಿನಾಂಕ 14.11.2006ರ ಸರ್ಕಾರದ ಆದೇಶ ಸಂ. ಒಇ 507 ಪಿಪಿಇ 2006ರಲ್ಲಿನ ತಃಖ್ತೆಯ ಕ್ರಮ ಸಂಖ್ಯೆ 14ರಲ್ಲಿನ ಅಂಕಣ 5ರಲ್ಲಿ ನಮೂದಿಸಿರುವ "ವಿಶೇಷ ಸರ್ಕಾರಿ ಅಭಿಯೋಜಕರು, 3ನೇ ತ್ವರಿತ ವಿಲೇವಾರಿ ನ್ಯಾಯಲಯ, ಹಾಸನ" ಎಂಬುದರ ಬದಲಾಗಿ "ವಿಶೇಷ ಸರ್ಕಾರಿ ಅಭಿಯೋಜಕರು, 2ನೇ ತ್ವರಿತ ವಿಲೇವಾರಿ ನ್ಯಾಯಾಲಯ, ಹಾಸನ" ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು. ಉಳಿದಂತೆ ಸದರಿ ಅಧಿಸೂಚನೆಯಲ್ಲಿ ಯಾವುದೇ ಬದಲಾವಣೆಗಳು ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 610

**ಆರ್. ನಿಸಾರ್ ಅಹಮದ್**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ
(ಕಾ. ಮತ್ತು ಸು. ಕಾಫಿಪೋಸ ಮತ್ತು ಅಭಿಯೋಗ)

**ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ**

**ತಿದ್ದುಪಡಿ ಆದೇಶ**

**ಸಂಖ್ಯೆ: ಪಸಂಮೀ 170 ಪಸಸೇ 2006 ಬೆಂಗಳೂರು ದಿನಾಂಕ: 22ನೇ ಮಾರ್ಚ್ 2007**

ಸರ್ಕಾರದ ಆದೇಶ ಸಂಖ್ಯೆ: ಪಸಂಮೀ 170 ಪಸಸೇ 2006, ದಿನಾಂಕ: 01.03.2007ಕ್ಕೆ ಲಗತ್ತಿಸಲಾದ ಅನುಬಂಧ–1ರಲ್ಲಿ ಗುರುತಿಸಿರುವ ಗ್ರಾಮಗಳಡಿಯಲ್ಲಿ ಈ ಕೆಳಕಂಡಂತೆ ತಿದ್ದಿ ಓದಿಕೊಳ್ಳತಕ್ಕದ್ದು.

| ಕ್ರಮ ಸಂಖ್ಯೆ | ತಾಲ್ಲೂಕಿನ ಹೆಸರು | ಸರ್ಕಾರದ ಆದೇಶ ದಿನಾಂಕ:01.03.2007ರಲ್ಲಿ ನಮೂದಿಸಿರುವುದು | ತಿದ್ದಿ ಓದಿಕೊಳ್ಳುವುದು |
|---|---|---|---|
| 3 | ಕೂಡ್ಲಿಗಿ | ಹಿರೇಕುಂಬಳ | ಹಿರೇಕುಂಬಗುಂಟ |
| 5 | ಔರಾದ್ | ರಾಮಸೇವಾತಾಂಡ | ರಾಮಸೇನಾತಾಂಡ |
| 9 | ಯಾದಗಿರಿ | ಕಾಕಳವಾಡ | ಕಾಕಳವಾರ |
| 22 | ಶಿಕಾರಿಪುರ | ಅಂಬಾಲಗೊಪ್ಪ | ಅಂಬಾರಗೊಪ್ಪ |
| 25 | ಬೇಲೂರು | ಗೋಣಿಸೋಮನಹಳ್ಳಿ | ಹೆಬ್ಬಾಳ್ಳು |
| 31 | ಅಥಣಿ | ಹುಲಗನಾಳ | ಹುಲಗಬಾಳ |
| 36 | ನಾಗಮಂಗಲ | ಬಿಂಡಿಗನವಿಲೆ | ಟಿ. ಚನ್ನಾಪುರ |

| | | | |
|---|---|---|---|
| 45 | ಗೌರಿಬಿದನೂರು | ಇಡಗೂರು | ಅಲಕಾಪುರ |
| 64 | ಮಾಗಡಿ | ಮುದಗೊಂಡನಹಳ್ಳಿ | ಮಾದಿಗೊಂಡನಹಳ್ಳಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 688

**ದೇವೇಂದ್ರಪ್ಪ ಕಟ್ಟೀಮನಿ**
ಪೀಠಾಧಿಕಾರಿ-2
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ
(ಪಶುಸಂಗೋಪನೆ-ಎ)

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಸಿ.ನಾಗರಾಜು, ಎಪಿಸಿ **1140**, ಸಿಎಆರ್ (ದ) ಬೆಂಗಳೂರು ನಗರ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯ ಬಗ್ಗೆ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಕಮೀಷನರ್ ನಗರ ಸಶಸ್ತ್ರ ಮೀಸಲು ಪಡೆ (ದಕ್ಷಿಣ ಬೆಂಗಳೂರು) ಇವರ ಆದೇಶ ಸಂಖ್ಯೆ:ಡಿಇ:**1:2004-05** ದಿನಾಂಕ: **06-06-2005**

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಜಂಟಿ ಪೊಲೀಸ್ ಕಮೀಷನರ್ ಸಿ.ಎ.ಆರ್. ಬೆಂಗಳೂರು ನಗರ ಇವರ ಆದೇಶ ಸಂಖ್ಯೆ:24/ ಅಪೀಲು/**2005** ದಿನಾಂಕ:**27-06-2006**

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:**29-11-2005**

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು**(2)123/2006-07** ದಿನಾಂಕ:

**<u>ಪ್ರಸ್ತಾವನೆ:</u>**

ಶ್ರೀ ಸಿ.ನಾಗರಾಜು, ಎಪಿಸಿ **1140**, ಸಿಎಆರ್ (ದ) ಬೆಂಗಳೂರು ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**<u>ದೋಷಾರೋಪಣೆ:-</u>**

ಶ್ರೀ ಸಿ.ನಾಗರಾಜು, ಎಪಿಸಿ **1140**, ಹೆಚ್.ಕ್ಯೂ ಪಂಗಡ (ಓ.ಓ.ಡಿ. ಐ ಪಂಗಡ) ಸಿಎಆರ್(ದಕ್ಷಿಣ) ಬೆಂಗಳೂರು ಆದ ನೀವು ದಿ:**2-8-2004**ರಿಂದ ಯಾವುದೇ ಮೇಲಾಧಿಕಾರಿಗಳ ಪೂರ್ವಾನುಮತಿಯನ್ನು ಪಡೆಯದೆ ಹಾಗೂ ಯಾವುದೇ ರಜೆ ಮಂಜೂರಾತಿ ಪಡೆಯದೆ ಫೋನ್ ಮುಖಾಂತರವಾಗಲಿ ಯಾವುದೇ ವಿಧದಲ್ಲಿಯಾಗಲಿ, ನಿಮ್ಮ ಗೈರುಹಾಜರಿಯ ಕಾರಣವನ್ನು ಕಛೇರಿಗೆ ತಿಳಿಸದೇ ಕರ್ತವ್ಯಕೆ ಗೈರುಹಾಜರಿಯಾಗಿರುತ್ತೀರಿ, ಹಾಗೂ ಗೈರುಹಾಜರಿಯಲ್ಲಿಯೇ ಮುಂದುವರಿದಿರುತ್ತೀರಿ, ಇದು ಶಿಸ್ತಿನ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿರುವ ನಿಮ್ಮ ಅಶಿಸ್ತು ದುರ್ನಡತೆ ಹಾಗೂ ಬೇಜವಾಬ್ದಾರಿಯನ್ನು ತೋರಿಸುತ್ತದೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಕಮೀಷನರ್ ನಗರ ಸಶಸ್ತ್ರ ಮೀಸಲು ಪಡೆ (ದ) ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:**6-6-2005**ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಜಂಟಿ ಪೊಲೀಸ್ ಕಮೀಷನರ್ ಸಿ.ಎ.ಆರ್. ಬೆಂಗಳೂರು ನಗರ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ:**27-06-2006**ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ನಾಲ್ಕು ತಿಂಗಳಿಗಿಂತ ಮೇಲ್ಪಟ್ಟು ಅನಧಿಕೃತ ಗೈರುಹಾಜರಾಗಿದ್ದು ಸಿ.ಆ.ಸು.ಇ. ಸುತ್ತೋಲೆ ಪ್ರಕಾರ 4 ತಿಂಗಳಿಗಿಂತ ಹೆಚ್ಚಿನ ಗೈರು ಹಾಜರಾಗಿದ್ದರೆ ಸೇವೆಯಿಂದ ತೆಗೆಯುವ ಶಿಕ್ಷೆ ವಿಧಿಸಬಹುದಾಗಿದೆ. ಇದು ಕಡಿಮೆ ಪ್ರಮಾಣದ ಶಿಕ್ಷೆಯಾಗಿರುತ್ತದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ

ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 185 ಪೊಸಿಅ 2007 ಬೆಂಗಳೂರು, ದಿನಾಂಕ:22–09–2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಸಿ.ನಾಗರಾಜು, ಎಪಿಸಿ 1140, ಸಿಎಆರ್ (ದ) ಬೆಂಗಳೂರು ನಗರ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ

ಪಿ.ಆರ್. 1739 (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಗೋಪಾಲಪ್ಪಾ, ಪಿಎಸ್ಐ, ರಾಯಚೂರು ಗ್ರಾಮೀಣ ಪೊಲೀಸ್‌ರವರ ಮೇಲಿನ ಲಂಚ ಸ್ವೀಕಾರ ಪ್ರಕರಣದಲ್ಲಿ ವಿಚಾರಣೆ ನಡೆಸುವ ಬಗ್ಗೆ.

**ಓದಲಾಗಿದೆ:** 1) ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ:ಅಪೀಲು(5)2/2007–08 ದಿನಾಂಕ 05–05–2007.

**ಪ್ರಸ್ತಾವನೆ:**

ಶ್ರೀ ಆರ್.ಗೋಪಾಲಪ್ಪಾ, ನಿವೃತ ಪಿಎಸ್ಐ ರವರು ಈ ಹಿಂದೆ ರಾಯಚೂರು ಗ್ರಾಮೀಣ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ 12–07–2006ರಂದು ರಾತ್ರಿ 7.30 ಗಂಟೆಯ ಸುಮಾರಿಗೆ ಶ್ರೀ ಶಿವರಾಜ ತಂದೆ ಹನುಮಂತರಾಯ ಸಾ:ಕರೇಕಲ್, ತಾ:ರಾಯಚೂರು ರವರು ಲೋಕಾಯುಕ್ತ ಕಛೇರಿಗೆ ಹಾಜರಾಗಿ ರಾಯಚೂರು ಗ್ರಾಮೀಣ ಪೊಲೀಸ್ ಠಾಣೆಯಲ್ಲಿ ಗುನ್ನೆ ಸಂ:158/06 ಕಲಂ 109,448,323,324,506(2) ಸಂಗಡ 34 ಐಪಿಸಿ ಪ್ರಕರಣದ ಇತ್ಯರ್ಥ ಕುರಿತು ರೂ.5,000/– ಅಕ್ರಮ ಸಂಭಾವನೆ ಕೇಳುತ್ತಿದ್ದಾರೆ ಎಂದು ನೀಡಿದ ದೂರಿನ ಮೇರೆಗೆ ರಾಯಚೂರು ಲೋಕಾಯುಕ್ತ ಪೊಲೀಸ್ ಅಧಿಕಾರಿಗಳು ತಮ್ಮ ಸಿಬ್ಬಂದಿಯವರೊಂದಿಗೆ ರಾತ್ರಿ 8.30 ಗಂಟೆಗೆ ರಾಯಚೂರು ಗ್ರಾಮೀಣ ಪೊಲೀಸ್ ಠಾಣೆಯಲ್ಲಿ ಧಾಳಿ ಮಾಡಿ, ಪಿಎಸ್ಐ ರವರು ಅಕ್ರಮ ಸಂಭಾವನೆ ಪಡೆಯುತ್ತಿದ್ದಾಗ ಲೋಕಾಯುಕ್ತ ಅಧಿಕಾರಿಗೆ ಸಿಕ್ಕಿ ಬಿದ್ದು, ಅವರಿಂದ ರೂ.4,000/–ಗಳನ್ನು ಜಪ್ತು ಮಾಡಿರುತ್ತಾರೆ. ಈ ಬಗ್ಗೆ ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ಗುನ್ನೆ ಸಂಖ್ಯೆ:3/06ರ ಪ್ರಕಾರ ಗುನ್ನೆ ದಾಖಲಾಗಿರುತ್ತದೆ. ಆದುದರಿಂದ, ಶ್ರೀ ಆರ್.ಗೋಪಾಲಪ್ಪಾ, ಪಿಎಸ್ಐ ರವರು ದಿನಾಂಕ: 30–09–2006ರಂದು ನಿವೃತ್ತಿಯಾಗಿರುವುದರಿಂದ, ಕರ್ನಾಟಕ ರಾಜ್ಯ ಸರ್ಕಾರಿ ಸೇವಾ ನಿಯಮಗಳ ನಿಯಮ 214(2) ಪ್ರಕಾರ, ಇಲಾಖಾ ವಿಚಾರಣೆಗೆ ಆದೇಶಿಸಲು ಮತ್ತು ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಡಿಎಸ್‌ಪಿ (ಡಿಇ) ಈಶಾನ್ಯ ವಲಯ ಕಛೇರಿ, ಗುಲ್ಬರ್ಗಾ ರವರನ್ನು ಇಲಾಖಾ ವಿಚಾರಣಾಧಿಕಾರಿಯನ್ನಾಗಿ ನೇಮಿಸುವಂತೆ ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಡಿಜಿ ಮತ್ತು ಐಜಿಪಿ ರವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 177 ಪೊಸಇ 2007 ಬೆಂಗಳೂರು, ದಿನಾಂಕ:10–07–2007.**

ಆದ್ದರಿಂದ, ಶ್ರೀ ಆರ್.ಗೋಪಾಲಪ್ಪಾ, ನಿವೃತ್ತ ಪಿ.ಎಸ್.ಐ. ಇವರ ವಿರುದ್ಧ ಕರ್ನಾಟಕ ರಾಜ್ಯ ಸರ್ಕಾರಿ ಸೇವಾ ನಿಯಮಗಳ ನಿಯಮ 214(2)(ಬಿ) ಪ್ರಕಾರ, ಇಲಾಖಾ ವಿಚಾರಣೆಗೆ ಆದೇಶಿಸಿದೆ ಹಾಗೂ ಈ ಇಲಾಖಾ ವಿಚಾರಣೆಯನ್ನು ನಡೆಸಲು ಡಿಎಸ್‌ಪಿ (ಡಿಇ) ಈಶಾನ್ಯ ವಲಯ ಕಛೇರಿ, ಗುಲ್ಬರ್ಗಾ ರವರನ್ನು ಇಲಾಖಾ ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ಸರ್ಕಾರವು ಆದೇಶಿಸಿದೆ.

ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ:ಸಿಆಸುಇ 19 ಸೇಇವಿ 2001 ದಿನಾಂಕ 28–06–2001 ರಲ್ಲಿನ ಸೂಚನೆಗಳನ್ವಯ ಸದರಿ ವಿಚಾರಣೆಯನ್ನು 3 ತಿಂಗಳೊಳಗಾಗಿ ಪೂರ್ಣಗೊಳಿಸಿ ವಿಚಾರಣೆ ವರದಿಯನ್ನು ಡಿಜಿ ಮತ್ತು ಐಜಿಪಿ ಇವರ ಮುಖಾಂತರ ಸರ್ಕಾರಕ್ಕೆ ಸಲ್ಲಿಸುವಂತೆ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್. 1288 ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ

(ಪೊಲೀಸ್ ಸೇವೆಗಳು)

**ವಿಷಯ:** ಶ್ರೀ.ಕೃಷ್ಣಪ್ಪ, ಕಮಾಂಡೆಂಟ್, 3ನೇ ಪಡೆ, ಕೆ.ಎಸ್.ಆರ್.ಪಿ. ಬೆಂಗಳೂರು ಇವರು ಸರ್ಕಾರದ ಪೂರ್ವಾನುಮತಿ ಪಡೆಯದೆ ಸ್ಥಿರಾಸ್ತಿಗಳನ್ನು ಖರೀದಿಸಿ : ವಿಲೇವಾರಿ ಮಾಡಿದ ಬಗ್ಗೆ – ವಿಚಾರಣಾಧಿಕಾರಿಗಳನ್ನು ಬದಲಾಯಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ:ಒಇ 295 ಪೊಸಿಪ 2004 ದಿನಾಂಕ 05–04–2005.
2) ಸರ್ಕಾರದ ಆದೇಶ ಸಂಖ್ಯೆ:ಒಇ 295 ಪೊಸಿಪ 2004, ದಿನಾಂಕ 06–03–2007.
3) ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ:ಸಿಬಿ5/12/2005–06, ದಿನಾಂಕ 11–05–2007.
4) ಶ್ರೀ.ಕೃಷ್ಣಪ್ಪ, ಕಮಾಂಡೆಂಟ್ 3ನೇ ಪಡೆ, ಕೆ.ಎಸ್.ಆರ್.ಪಿ. ಬೆಂಗಳೂರು ರವರ ಮನವಿ ದಿನಾಂಕ 24–05–2007.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಶ್ರೀ.ಕೃಷ್ಣಪ್ಪ, ಕಮಾಂಡೆಂಟ್, 3ನೇ ಪಡೆ, ಕೆ.ಎಸ್.ಆರ್.ಪಿ. ಬೆಂಗಳೂರು ಇವರು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು, 1966ರ ನಿಯಮ 23ನ್ನು ಉಲ್ಲಂಘಿಸಿರುವುದರಿಂದ ಇವರ ವಿರುದ್ಧ ಕೆ.ಎಸ್.ಪಿ. (ಡಿಪಿ) ನಿಯಮಗಳು, 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಲಾಗಿದೆ. ಈ ವಿಚಾರಣೆಯನ್ನು ನಡೆಸಲು ಶ್ರೀ.ಎಸ್.ಟಿ.ರಮೇಶ್, ಎ.ಡಿ.ಜಿ.ಪಿ. (ಪಿಸಿಡಬ್ಲ್ಯೂ) ಇವರನ್ನು ವಿಶೇಷ ಅಧಿಕಾರಯುಕ್ತ ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಮೇಲೆ (2) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಶ್ರೀ.ಎಸ್.ಟಿ.ರಮೇಶ್, ಎ.ಡಿ.ಜಿ.ಪಿ. (ಪಿಸಿಡಬ್ಲ್ಯೂ) ಇವರ ಬದಲಿಗೆ ಅಡಿಷನಲ್ ಡೈರೆಕ್ಟರ್ ಜನರಲ್ ಆಫ್ ಪೊಲೀಸ್ (ನೇಮಕಾತಿ ಮತ್ತು ತರಬೇತಿ) ಬೆಂಗಳೂರು ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿದೆ.

ಡಿಜಿ ಮತ್ತು ಐಜಿಪಿ ರವರು ಮೇಲೆ (3) ರಲ್ಲಿ ಓದಲಾದ ಪತ್ರದಲ್ಲಿ ಅಡಿಷನಲ್ ಡೈರೆಕ್ಟರ್ ಜನರಲ್ ಆಫ್ ಪೊಲೀಸ್ (ನೇಮಕಾತಿ ಮತ್ತು ತರಬೇತಿ) ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲು ಇರುವ ಅಡಚಣೆಗಳನ್ನು ವಿವರಿಸಿ ಇವರ ಬದಲಿಗೆ ಬೇರೊಬ್ಬ ಅಧಿಕಾರಿಯನ್ನು ನೇಮಿಸಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮೇಲೆ (4) ರಲ್ಲಿನ ಮನವಿಯಲ್ಲಿ ಶ್ರೀ.ಕೃಷ್ಣಪ್ಪ, ಕಮಾಂಡೆಂಟ್, 3ನೇ ಪಡೆ, ಕೆ.ಎಸ್.ಆರ್.ಪಿ. ಬೆಂಗಳೂರು ರವರು ಸರ್ಕಾರಕ್ಕೆ ಮನವಿ ಸಲ್ಲಿಸಿ ತಾವು ದಿನಾಂಕ 24–08–2004ರಲ್ಲಿ ಖರೀದಿದಾರರೊಂದಿಗೆ ಮಾಡಿಕೊಂಡ ಕರಾರಿನಂತೆ ಕರಾರಿನ ದಿನದಿಂದ 3 ತಿಂಗಳ ಒಳಗಡೆ ಖರೀದಿ ಮಾಡದಿದ್ದಲ್ಲಿ ಮುಂಗಡವಾಗಿ ನೀಡಿದ್ದು, ರೂ.2.50 ಲಕ್ಷಗಳನ್ನು ಮುಟ್ಟುಗೋಲು ಹಾಕಿಕೊಳ್ಳುತ್ತಿದ್ದುದರಿಂದ ಈ ಸಂಬಂಧ ಸರ್ಕಾರಕ್ಕೆ ಎಲ್ಲಾ ವಿವರಣೆಗಳನ್ನು ನೀಡಿ ಕರಾರಿನಂತೆ ದಿನಾಂಕ 22–11–2004 ರಂದು ಸದರಿ ನಿವೇಶನವನ್ನು ತಮ್ಮ ಹೆಸರಿಗೆ ನೋಂದಾಯಿಸಿಕೊಂಡಿರುವುದಾಗಿ ಹಾಗೂ ಬಿ.ಡಿ.ಎ. ವತಿಯಿಂದ ಹಂಚಿಕೆಯಾಗಿದ್ದ, ನಿವೇಶನವನ್ನು ಹಣದ ಕೊರತೆಯಿಂದ ಮಾರಾಟ ಮಾಡಲು ಸರ್ಕಾರದ ಅನುಮತಿಯನ್ನು ಕೋರಿದ್ದು, ಖರೀದಿದಾರರೊಂದಿಗೆ ಮಾಡಿಕೊಂಡ ಒಪ್ಪಂದದ ಮೇರೆಗೆ 04–02–2004ರಂದು ಮಾರಾಟ ಮಾಡಿರುವುದಾಗಿ ಹಾಗೂ ಈ ಬಗ್ಗೆ ಸರ್ಕಾರಕ್ಕೆ ಮಾಹಿತಿ ಕಳುಹಿಸಿದ್ದುದರಿಂದ ತಮ್ಮಿಂದ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು 1966ರ ನಿಯಮ 23 ಉಲ್ಲಂಘನೆಯಾಗಿಲ್ಲವೆಂದು ಹಾಗೂ ತಮ್ಮ ಮೇಲಿನ ಇಲಾಖಾ ವಿಚಾರಣೆಯನ್ನು ಕೈಬಿಡಬೇಕೆಂದು ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 295 ಪೊಸಿಪ 2004 ಬೆಂಗಳೂರು, ದಿನಾಂಕ: 12–07–2007,**

ಶ್ರೀ.ಕೃಷ್ಣಪ್ಪ, ಕಮಾಂಡೆಂಟ್, 3ನೇ ಪಡೆ, ಕೆ.ಎಸ್.ಆರ್.ಪಿ. ಬೆಂಗಳೂರು ಇವರಿಗೆ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು, 1966ರ ಉಲ್ಲಂಘನೆ ಮಾಡದಿರಲು ಸೂಚಿಸಿ, 'ಎಚ್ಚರಿಕೆ' ನೀಡಿ ಸರ್ಕಾರದ ಆದೇಶ ಸಂಖ್ಯೆ:ಒಇ 295 ಪೊಸಿಪ 2004, ದಿನಾಂಕ 05–04–2005ರಲ್ಲಿ ಆದೇಶಿಸಿದ್ದ ಇಲಾಖಾ ವಿಚಾರಣೆಯನ್ನು ಮುಕ್ತಾಯಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ

(ಪೊಲೀಸ್ ಸೇವೆಗಳು)

ಪಿ.ಆರ್. 1312

**ವಿಷಯ:** ಶ್ರೀ ಹೆಚ್.ಟಿ.ಕೃಷ್ಣಪ್ಪ, ಡಿವೈ.ಎಸ್.ಪಿ, ಗಂಗಾವತಿ ಉಪ ವಿಭಾಗ, ಕೊಪ್ಪಳ ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

**ಓದಲಾಗಿದೆ:** ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ:LOK/INV/(G)City/Cr.24/2007 ದಿನಾಂಕ 11–7–2007.

**ಸರ್ಕಾರದ ಆದೇಶ ಸಂಖ್ಯೆ.ಒಇ 262 ಪೊಸಿಪ 2007 ಬೆಂಗಳೂರು, ದಿನಾಂಕ 19–07–2007.**

ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ದಿನಾಂಕ 11–07–2007ರ ಪತ್ರದಲ್ಲಿ ಶ್ರೀ.ಹೆಚ್.ಟಿ.ಕೃಷ್ಣಪ್ಪ, ಡಿವೈ.ಎಸ್.ಪಿ. ಗಂಗಾವತಿ ಉಪ ವಿಭಾಗ ಇವರು

ಶ್ರೀ.ಆರ್.ಪಳನಿಸ್ವಾಮಿ, ಕೃಷಿ ಕೆಲಸ, ಅಣ್ಣೂರು ಗೌರಮ್ಮ ಕಾಂಪ್, ಗಂಗಾವತಿ ಇವರ ಭೂಮಿ ವ್ಯಾಜ್ಯವನ್ನು ಬಗೆಹರಿಸುವುದಾಗಿ ಹಾಗೂ ಹೊಡೆದಾಟದ ಕೇಸು 506 ನ್ನು ಮುಕ್ತಾಯಗೊಳಿಸುವುದಕ್ಕೆ ರೂ.10-00 ಲಕ್ಷ ಲಂಚದ ಹಣವನ್ನು ನೀಡಲು ಸೂಚಿಸಿದ್ದಾಗಿ ಹಾಗೂ ಇಷ್ಟು ಹಣ ಇಲ್ಲವೆಂದು ತಿಳಿಸಿದಾಗ ರೂ.5-00 ಲಕ್ಷ ಹಣವನ್ನು ಕೊಡಲು ಒತ್ತಾಯಿಸಿದ್ದಾಗಿ ಹಾಗೂ ಇದೇ ರೀತಿ ಪೊಲೀಸ್ ಇನ್ಸ್‌ಪೆಕ್ಟರ್ ಶ್ರೀ.ವೆಂಕಟೇಶ್ ನಾಯ್ಡು ಮತ್ತು ಶ್ರೀ.ಅತೀಕ್, ರೈಟರ್ ರವರು 506 ಕೇಸನ್ನು ಮುಗಿಸಲು ರೂ.50,000-00 ಗಳನ್ನು ಕೇಳಿದ್ದಾಗಿ ಶ್ರೀ.ಪಳನಿಸ್ವಾಮಿ ರವರು ಈ ಅಧಿಕಾರಿಗಳ ವಿರುದ್ಧ ಲೋಕಾಯುಕ್ತಕ್ಕೆ ಕಾನೂನು ರೀತಿಯ ಕ್ರಮ ಕೈಗೊಳ್ಳಲು ಕೋರಿ ದೂರು ಸಲ್ಲಿಸಿದ್ದಾಗಿ, ಈ ಅಧಿಕಾರಿಗಳ ವಿರುದ್ಧ ಬೆಂಗಳೂರು ನಗರ ಲೋಕಾಯುಕ್ತ ಪೊಲೀಸ್ ಠಾಣೆ ಮೊ.ಸಂ.24/2007 ಕಲಂ 7, 13(1)(ಡಿ) ಜೊತೆಗೆ 13(2) ಲಂಚ ನಿರೋಧ ಕಾಯ್ದೆ, 1988ರ ಅನ್ವಯ ಪ್ರಕರಣ ದಾಖಲು ಮಾಡಿಕೊಂಡಿರುವುದಾಗಿ ವರದಿ ಮಾಡಿರುತ್ತಾರೆ. ಮುಂದುವರೆದು ದಿನಾಂಕ 08-07-2007 ರಂದು ಆರೋಪಿ-1 ಶ್ರೀ.ಹೆಚ್.ಟಿ.ಕೃಷ್ಣಪ್ಪ ರವರು ಫಿರ್ಯಾದುದಾರರಿಗೆ ಫೋನ್ ಮಾಡಿ ಈಗ ಸಧ್ಯಕ್ಕೆ ರೂ.3-00 ಲಕ್ಷ ಹಣ ತಂದುಕೊಡಲು ಒತ್ತಾಯಿಸಿರುತ್ತಾರೆ. ಅದರಂತೆ ಗಂಗಾವತಿ ಉಪ ವಿಭಾಗದ ಪೊಲೀಸ್ ಉಪ ವಿಭಾಗಾಧಿಕಾರಿಗಳ ಕಛೇರಿಯಲ್ಲಿ ಬೀಸಿದ ಲಂಚದ ಬಲೆಯು ಯಶಸ್ವಿಯಾಗಿರುವುದಾಗಿ ಶ್ರೀ.ಹೆಚ್.ಟಿ.ಕೃಷ್ಣಪ್ಪ, ಇವರು ಫಿರ್ಯಾದುದಾರರಿಂದ ಲಂಚದ ಹಣ ರೂ.3-00 ಲಕ್ಷ ಪಡೆದುಕೊಂಡಿದ್ದು, ಮತ್ತು ಆರೋಪಿ-2 ಶ್ರೀ.ವೆಂಕಟೇಶ್ ನಾಯ್ಡು, ಪೊಲೀಸ್ ಇನ್ಸ್‌ಪೆಕ್ಟರ್ ರವರು ಲಂಚದ ಹಣ ರೂ.50,000-00 ಗಳನ್ನು ತೆಗೆದುಕೊಂಡು ಆರೋಪಿ-3 ಶ್ರೀ.ಅತೀಕ್, ರೈಟರ್ ರವರಿಗೆ ಕೊಟ್ಟಿದ್ದಾಗಿ ನೆರಳು ಸಾಕ್ಷಿದಾರರು ಮಹಜರ್ ಸಮಯದಲ್ಲಿ ನುಡಿದಿರುತ್ತಾರೆ. ಶ್ರೀ.ಹೆಚ್.ಟಿ.ಕೃಷ್ಣಪ್ಪ ರವರು ಪಡೆದುಕೊಂಡರೆನ್ನಲಾದ ರೂ.3-00 ಲಕ್ಷ ದೊರೆತಿರುವುದಿಲ್ಲ. ಆದರೆ ಶೋಧನಾ ಸಮಯದಲ್ಲಿ ರೂ.1,35,000-00 ದೊರೆತಿದ್ದು, ಇದಕ್ಕೆ ಸಮಂಜಸವಾದ ಉತ್ತರ ಇಲ್ಲದಿದ್ದುದರಿಂದ ಹಣವನ್ನು ಜಪ್ತು ಮಾಡಲಾಗಿದೆ. ಈ ಆರೋಪಿತರನ್ನು ದಿನಾಂಕ 09-07-2007ರಂದು ದಸ್ತಗಿರಿ ಮಾಡಿ ದಿನಾಂಕ 10-07-2007ರಂದು ನ್ಯಾಯಾಧೀಶರ ಮುಂದೆ ಹಾಜರುಪಡಿಸಿದ್ದು, ದಿನಾಂಕ 16-07-2007 ರವರೆಗೆ ನ್ಯಾಯಾಂಗ ಬಂಧನಕ್ಕೆ ಆದೇಶಿಸಿದ್ದು ದಿನಾಂಕ 9-7-2007 ರಿಂದ ಇವರನ್ನು ಅಮಾನತ್ತಿನಲ್ಲಿಡಲು ಪರಿಗಣಿಸಲು ಕೋರಿರುವುದರಿಂದಲೂ,

ಈ ಸಂಬಂಧ ಕರ್ನಾಟಕ ಲೋಕಾಯುಕ್ತ ರವರ ಪ್ರಾಥಮಿಕ ವರದಿಯನ್ವಯ ಶೀ ಹೆಚ್.ಟಿ.ಕೃಷ್ಣಪ್ಪ, ಪೊಲೀಸ್ ಉಪಾಧೀಕ್ಷಕರು, ಗಂಗಾವತಿ ಉಪ ವಿಭಾಗ, ಕೊಪ್ಪಳ ಜಿಲ್ಲೆ ಇವರು ತಮ್ಮ ಸ್ಥಾನದಲ್ಲೇ ಮುಂದುವರೆದರೆ ತನಿಖೆಯ ಹಾದಿಯನ್ನು ತಪ್ಪಿಸಬಹುದಾದ ಹಾಗೂ ಸಾಕ್ಷ್ಯಾಧಾರಗಳನ್ನು ನಾಶಪಡಿಸುವ ಅವಕಾಶವಿರುವುದರಿಂದ ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು ಇವರನ್ನು ದಸ್ತಗಿರಿ ಮಾಡಿದ ದಿನಾಂಕ 09-07-2007 ರಿಂದಲೇ ಸೇವೆಯಿಂದ ಅಮಾನತ್ತು ಗೊಳಿಸುವುದು ಅವಶ್ಯವೆಂದು ಸರ್ಕಾರವು ಭಾವಿಸಿರುವುದರಿಂದಲೂ,

ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಗಳು, 1965ರ ನಿಯಮ 5(1) ಮತ್ತು 5(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶೀ ಹೆಚ್.ಟಿ.ಕೃಷ್ಣಪ್ಪ, ಪೊಲೀಸ್ ಉಪಾಧೀಕ್ಷಕರು, ಗಂಗಾವತಿ ಉಪ ವಿಭಾಗ, ಕೊಪ್ಪಳ ಜಿಲ್ಲೆ ಇವರ ವಿರುದ್ಧ ಶಿಸ್ತು ಕ್ರಮವನ್ನು ಕಾಯ್ದಿಟ್ಟು, ದಿನಾಂಕ 09-07-2007 ರಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಮೂಲಕ ಸೇವೆಯಿಂದ ಅಮಾನತ್ತಿನಲ್ಲಿಡುತ್ತದೆ.

ಶ್ರೀ ಹೆಚ್.ಟಿ.ಕೃಷ್ಣಪ್ಪ, ಪೊಲೀಸ್ ಉಪಾಧೀಕ್ಷಕರು ಇವರ 'ಲೀನ್' ಅನ್ನು ಖಾಲಿ ಇರುವ ಡಿವೈ.ಎಸ್.ಪಿ., ರಾಜ್ಯ ಗುಪ್ತವಾರ್ತೆ ಇಲ್ಲಿಗೆ ಬದಲಾಯಿಸಿದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಹೆಚ್.ಟಿ.ಕೃಷ್ಣಪ್ಪ, ಪೊಲೀಸ್ ಉಪಾಧೀಕ್ಷಕರು, ಗಂಗಾವತಿ ಉಪ ವಿಭಾಗ, ಕೊಪ್ಪಳ ಜಿಲ್ಲೆ ರವರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 98ರ ಅನ್ವಯ ಜೀವನಾಧಾರ ಭತ್ಯೆಯನ್ನು ಪಡೆಯುತ್ತಾರೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಹೆಚ್.ಟಿ.ಕೃಷ್ಣಪ್ಪ, ಪೊಲೀಸ್ ಉಪಾಧೀಕ್ಷಕರು ರವರು ಸಕ್ಷಮ ಪ್ರಾಧಿಕಾರದ ಅನುಮೋದನೆಯನ್ನು ಪಡೆಯದೆ ಕೇಂದ್ರಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ

ಪಿ.ಆರ್. 1318 (ಪೊಲೀಸ್ ಸೇವೆಗಳು)

**ವಿಷಯ:** 1999-2000ನೇ ಸಾಲಿನಲ್ಲಿ ನಡೆದ ನೇಮಕಾತಿಯಲ್ಲಿ ಅಭ್ಯರ್ಥಿಗಳಿಂದ ಹಣ ಪಡೆದು ಅವ್ಯವಹಾರ ನಡೆಸಿದ ಬಗ್ಗೆ ಮತ್ತು ಅವ್ಯವಹಾರದಲ್ಲಿ ಬಾಗಿಯಾದ ಸಿಬ್ಬಂದಿಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ:ಒಇ 154 ಪೊಸಿಪ 2003 ದಿನಾಂಕ 15-09-2003.
2) ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಬೆಂಗಳೂರು ಇವರ ಪತ್ರ ಸಂ:ಸಿಬಿ(5):55:2002-03 ದಿನಾಂಕ 31-08-2006.

ಶೀ ಎಸ್.ಚೇತನ್ ಕುಮಾರ್, ಕಮಾಂಡೆಂಟ್, 2ನೇ ಪಡೆ, ಕೆ.ಎಸ್.ಆರ್.ಪಿ. ಬೆಳಗಾವಿ (ದಿನಾಂಕ:02-09-2003ರಂದು ಮೈಸೂರಿನಲ್ಲಿ ನಿಧನರಾಗಿರುತ್ತಾರೆ) ರವರು ಮತ್ತು ಸಿಬ್ಬಂದಿ 1999-2000ನೇ ಸಾಲಿನಲ್ಲಿ

ಪೊಲೀಸ್ ಪೇದೆಗಳ ನೇಮಕಾತಿಯಲ್ಲಿ ಅಭ್ಯರ್ಥಿಗಳಿಂದ ಹಣ ಪಡೆದು ಅವ್ಯವಹಾರ ನಡೆಸಿದ ಬಗ್ಗೆ ಆಪಾದಿತರ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಲು ಈ ಕೆಳಕಾಣಿಸಿದ

1) ಶ್ರೀ ಎಸ್.ಚೇತನ್‌ಕುಮಾರ್, ಕಮಾಂಡೆಂಟ್, 2ನೇ ಪಡೆ, ಕೆ.ಎಸ್.ಆರ್.ಪಿ. ಬೆಳಗಾವಿ(ನಿಧನರಾಗಿರುತ್ತಾರೆ)
2) ಶ್ರೀ ಸಿ.ಸಿ.ಮಮದಾಪುರ, ಆರ್.ಎಸ್.ಐ.
3) ಶ್ರೀ ವಿ.ಇ.ಹೀರೇಮಠ್, ಎ.ಆರ್.ಎಸ್.ಐ.
4) ಶ್ರೀ ಎ.ಕೆ.ಮಾಳಗಿ, ಹವಾಲ್ದಾರ್-17
5) ಶ್ರೀ ಆರ್.ಬಡಿಗೇರ್, ಪೇದೆ-425
6) ಶ್ರೀ ಬಿ.ಎಂ.ಹನಗಂದಿ, ಪೇದೆ-381
7) ಶ್ರೀ ಆರ್.ಆರ್.ನೇರಳೇಕರ್-ಪೇದೆ-810
8) ಶ್ರೀ ಕೆ.ಎಂ.ಕಚ್ಚರಗಿ - ಪೇದೆ-808
9) ಶ್ರೀ ದೇವರಮನಿ - ಪೇದೆ

ಪೊಲೀಸ್ ಸಿಬ್ಬಂದಿಗಳ ವಿರುದ್ಧ ಕೆ.ಎಸ್.ಪಿ (ಡಿ.ಪಿ) ನಿಯಮಗಳು, 1965ರ ನಿಯಮ 6 ಮತ್ತು 8ರನ್ವಯ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಲು ಮೇಲೆ ಓದಲಾದ ಉಲ್ಲೇಖ(1)ರ ಆದೇಶದಲ್ಲಿ ಡಿ.ಐ.ಜಿ.ಪಿ. (ಆರ್ಥಿಕ ಅಪರಾಧಗಳು) ಬೆಂಗಳೂರು ಇವರನ್ನು ವಿಶೇಷ ಅಧಿಕಾರಹೊಂದಿದ ಇಲಾಖಾ ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ. ನಂತರ ಇಲಾಖಾ ವಿಚಾರಣಾಧಿಕಾರಿಗಳು ನಿಯಮಾನುಸಾರ ತನಿಖೆ ನಡೆಸಿ ದಿನಾಂಕ 09-08-2006ರಂದು ಇಲಾಖಾ ವಿಚಾರಣೆಯ ಅಂತಿಮ ವರದಿ ಸಲ್ಲಿಸಿದ್ದು, ಈ ಆರೋಪಿತ ಅಧಿಕಾರಿಗಳ ವಿರುದ್ಧ ಮಾಡಲಾದ ಯಾವ ದೋಷಾರೋಪಣೆ ಸಾಬೀತಾಗಿರುವುದಿಲ್ಲವೆಂದು ವರದಿ ಮಾಡಿರುತ್ತಾರೆ. ಆದರೆ ಡಿಜಿ ಮತ್ತು ಐಜಿಪಿ ರವರು ಪತ್ರ ಸಂಖ್ಯೆ:ಸಿಬಿ(5)55/2002-03 ದಿನಾಂಕ 31-08-2006ರ ಪತ್ರದಲ್ಲಿ ವಿಚಾರಣಾಧಿಕಾರಿಯವರು ಸಲ್ಲಿಸಿರುವ ದಾಖಲಾತಿಗಳನ್ನು ಪರಿಶೀಲಿಸಲಾಗಿ ಅಭಿಯೋಗ ಸಾಕ್ಷಿಗಳು ನೀಡಿರುವ ಹೇಳಿಕೆಗಳು ಆಪಾದಿತರ ವಿರುದ್ಧ ಮಾಡಲಾದ ದೋಷಾರೋಪಣೆಗಳನ್ನು ಧೃಢಪಡಿಸಿಲ್ಲವೆಂದು ತಿಳಿಸಿರುವುದು ವಿಚಾರಣಾಧಿಕಾರಿಯ ವರದಿಯನ್ನು ತಿರಸ್ಕರಿಸಿ ಕೆ.ಎಸ್.ಪಿ (ಡಿಪಿ) ನಿಯಮ 1965ರ ಉಪ ನಿಯಮ 91ರ ಪ್ರಕಾರ ಆರೋಪಿತ ಪೊಲೀಸ್ ಅಧಿಕಾರಿಗಳಿಗೆ ಕಾರಣ ಕೇಳುವ ನೋಟೀಸ್ ನೀಡಿ ಸೂಕ್ತ ಶಿಕ್ಷೆಯನ್ನು ವಿಧಿಸಿದ ಆದೇಶವನ್ನು ಹೊರಡಿಸುವಂತೆ ಕೋರಿರುತ್ತಾರೆ. ಒಂದು ವೇಳೆ ಕಾರಣ ಕೇಳುವ ನೋಟೀಸ್ ನಿಡಲು ಒಪ್ಪದೆ ಇದ್ದಲ್ಲಿ ಕರ್ನಾಟಕ ಪೊಲೀಸ್ ಆ್ಯಕ್ಟ್, 1963ರ ಸೆಕ್ಷನ್ 25, ಉಪ ಸೆಕ್ಷನ್ 2, ಕ್ಲಾಸ್(ಸಿ)ಯ ಪ್ರಕಾರ ಹೊಸದಾಗಿ (DENOVO ENQUIRY) ಇಲಾಖಾ ವಿಚಾರಣೆಗೆ ಆದೇಶಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 112 ಪೊಸಿಪ 2007 ಬೆಂಗಳೂರು, ದಿನಾಂಕ:18-06-2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಈ ಕೆಳಕಂಡ ಆಪಾದಿತ ಪೊಲೀಸ್ ಸಿಬ್ಬಂದಿಗಳಾದ:

1) ಶ್ರೀ ಸಿ.ಸಿ.ಮಮದಾಪುರ, ಆರ್.ಎಸ್.ಐ.
2) ಶ್ರೀ ವಿ.ಇ.ಹೀರೇಮಠ್, ಎ.ಆರ್.ಎಸ್.ಐ.
3) ಶ್ರೀ ಎ.ಕೆ.ಮಾಳಗಿ, ಹವಾಲ್ದಾರ್-17
4) ಶ್ರೀ ಆರ್.ಬಡಿಗೇರ್, ಪೇದೆ-425
5) ಶ್ರೀ ಬಿ.ಎಂ.ಹನಗಂದಿ, ಪೇದೆ-381
6) ಶ್ರೀ ಆರ್.ಆರ್.ನೇರಳೇಕರ್-ಪೇದೆ-810
7) ಶ್ರೀ ಕೆ.ಎಂ.ಕಚ್ಚರಗಿ - ಪೇದೆ-808
8) ಶ್ರೀ ದೇವರಮನಿ - ಪೇದೆ

ರವರ ವಿರುದ್ಧ ತನಿಖೆ ನಡೆಸಿ ದಿನಾಂಕ 09-08-2006 ರಂದು ವಿಚಾರಣಾಧಿಕಾರಿಯವರು ನಿಡಿದ ವರದಿಯಲ್ಲಿ ಆಪಾಧಿತರ ವಿರುದ್ಧ ಮಾಡಲಾದ ಯಾವ ದೋಷಾರೋಪಣೆಯು ಸಾಬೀತಾಗಿಲ್ಲವೆಂದು ವರದಿ ಮಾಡಿರುತ್ತಾರೆ. ಆದರೆ ದಾಖಲಾತಿಗಳನ್ನು ಪರಿಶೀಲಿಸಲಾಗಿ ಅಭಿಯೋಗಪರ ನೀಡಿರುವ ಸಾಕ್ಷಿಗಳು ಪರಿಶೀಲಿಸಿ ಕರ್ನಾಟಕ ಪೊಲೀಸ್ ಆ್ಯಕ್ಟ್, 1963ರ ಸೆಕ್ಷನ್ 25, ಉಪ ಸೆಕ್ಷನ್ 2, ಕ್ಲಾಸ್(ಸಿ)ಯ ಪ್ರಕಾರ ಹೊಸದಾಗಿ (DENOVO ENQUIRY) ಯನ್ನು ಮಾಡಲು ಸರ್ಕಾರವು ಆದೇಶಿಸಿದೆ.

ಈಗ ಇಲಾಖಾ ವಿಚಾರಣೆಯನ್ನು ನಡೆಸಲು ಪ್ರಾಂಶುಪಾಲರು, ಕೆ.ಎಸ್.ಪಿ.ಟಿ.ಎಸ್., ಖಾನಾಪುರ ಇವರನ್ನು ವಿಶೇಷ ಅಧಿಕಾರಹೊಂದಿದ ವಿಚಾರಣಾಧಿಕಾರಿಯಾಗಿ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ
(ಪೊಲೀಸ್ ಸೇವೆಗಳು)

ಪಿ.ಆರ್. 1165

**ಶಿಕ್ಷಣ ಸಚಿವಾಲಯ**

**ವಿಷಯ:** 2007–08ನೇ ಸಾಲಿಗೆ ರಾಜ್ಯದಲ್ಲಿ ಹೊಸ ಸರ್ಕಾರಿ ಇಂಜಿನಿಯರಿಂಗ್ ಕಾಲೇಜುಗಳ ಪ್ರಾರಂಭಿಕೆಗೆ ಆಯವ್ಯಯ ಮರು ಹೊಂದಾಣಿಕೆ ಕುರಿತು.

**ಓದಲಾಗಿದೆ:–** 1. ಸರ್ಕಾರದ ಆದೇಶ ಸಂಖ್ಯೆ: ಇಡಿ: 123 ಯೋಯೋಕ 2007 ದಿನಾಂಕ: 3–05–2007.
2. ಸರ್ಕಾರದ ಆದೇಶ ಸಂಖ್ಯೆ: ಇಡಿ: 60 :ಟಿ.ಇ.ಸಿ 2007[1] ದಿನಾಂಕ: 6–07–2007.
3. ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ: ಡಿ.ಟಿ.ಇ:62:ಡಿವಿಪಿ(1) 2007 ದಿನಾಂಕ: 20–08–2007

**ಪ್ರಸ್ತಾವನೆ:**

(1) ಮೇಲೆ ಓದಲಾದ (1) ರ ಸರ್ಕಾರದ ಆದೇಶದಲ್ಲಿ ಸರ್ಕಾರವು ತಾಂತ್ರಿಕ ಶಿಕ್ಷಣ ಇಲಾಖೆಯಡಿ 2007–08ನೇ ಸಾಲಿಗೆ ಯೋಜನಾ ಕಾರ್ಯಕ್ರಮಗಳನ್ನು ಮುಂದುವರೆಸಲು ಮಂಜೂರಾತಿ ನೀಡಿ ಆದೇಶ ಹೊರಡಿಸಿದೆ.

(2) ಮೇಲೆ ಓದಲಾದ (2) ರ ಸರ್ಕಾರದ ಆದೇಶದಲ್ಲಿ ಸರ್ಕಾರವು ರಾಜ್ಯದಲ್ಲಿನ ಸರ್ಕಾರಿ ಎಸ್.ಕೆ.ಎಸ್.ಜೆ.ಟಿ ಸಂಸ್ಥೆ, ಬೆಂಗಳೂರು, ಇಲ್ಲಿ 4 ಹೊಸ ಇಂಜಿನಿಯರಿಂಗ್ ಕೋರ್ಸ್ ಪ್ರಾರಂಭಿಕೆಗೆ ಹಾಗೂ ರಾಮನಗರ, ಹಾಸನ, ಚಾಮರಾಜನಗರ, ಮತ್ತು ಕೆ.ಆರ್.ಪೇಟೆಗಳಲ್ಲಿ ತಲಾ ಒಂದರಂತೆ ಹೊಸ ಸರ್ಕಾರಿ ಇಂಜಿನಿಯರಿಂಗ್ ಕಾಲೇಜು ಗಳನ್ನು ಪ್ರಾರಂಭಿಸಲು ಮಂಜೂರಾತಿ ನೀಡಲಾಗಿದೆ.

(3) ಮೇಲೆ (3)ರಲ್ಲಿ ಓದಲಾದ ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ ಬೆಂಗಳೂರು ರವರು ಮೇಲೆ ನಮೂದಿಸಿದ 4 ಹೊಸ ಸರ್ಕಾರಿ ಇಂಜಿನಿಯರಿಂಗ್ ಕಾಲೇಜುಗಳ ಪ್ರಾರಂಭಿಕೆಗೆ ಸಂಬಂಧಿಸಿದಂತೆ ಮೂಲಭೂತ ಸೌಕರ್ಯಗಳಾದ ಯಂತ್ರೋಪಕರಣ, ಪೀಠೋಪಕರಣ, ಪುಸ್ತಕ ಮುಂತಾದವುಗಳ ಖರೀದಿಗೆ ಹಾಗೂ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳಿಗೆ ಸಂಬಳ ವಿತರಣೆಗೆ ಆಯವ್ಯಯದ ಅಗತ್ಯತೆ ಇದ್ದು, 2007–08ನೇ ಸಾಲಿಗೆ ರಾಜ್ಯ ಯೋಜನಾ ಲೆಕ್ಕ ಶೀರ್ಷಿಕೆ 2203–00–112–0–02 ರಡಿಯಲ್ಲಿ ಸರ್ಕಾರವು ಆಯವ್ಯಯ ಒದಗಿಸಿರುವುದಿಲ್ಲವೆಂದು ತಿಳಿಸಿ ಇದಕ್ಕಾಗಿ ಲೆಕ್ಕ ಶೀರ್ಷಿಕೆ 4202–02–104–1–03(ಯೋಜನೆ)ಯಿಂದ ಲೆಕ್ಕ ಶೀರ್ಷಿಕೆ 2203–00–112–0–02 ಸರ್ಕಾರಿ ಇಂಜಿನಿಯರಿಂಗ್ ಕಾಲೇಜು – ಯೋಜನೆಗೆ ಮರು ಹೊಂದಾಣಿಕೆಯ ಮೂಲಕ ಭರಿಸಲು ಅನುಕೂಲವಾಗುವಂತೆ ಸರ್ಕಾರದ ಆದೇಶವನ್ನು ಕೋರಿರುತ್ತಾರೆ.

(4) ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ: 293 :ಯೋಯೋಕ 2007 ಬೆಂಗಳೂರು, ದಿ.18–09–2007**
**[ಇಡಿ: 142 : ಸ್ವೀಮರ(ಯುನಿಕ್) 2007, ದಿನಾಂಕ 18–09–2007]**

(5) 2007–08ನೇ ಸಾಲಿಗೆ ಮಂಜೂರಾದ ಹೊಸ ಸರ್ಕಾರಿ ಇಂಜಿನಿಯರಿಂಗ್ ಕಾಲೇಜುಗಳಿಗೆ ಅವಶ್ಯಕವಾದ ಮೂಲಭೂತ ಸೌಕರ್ಯಗಳು, ಯಂತ್ರೋಪಕರಣಗಳು, ಪೀಠೋಪಕರಣಗಳು, ಪುಸ್ತಕ, ಬೋಧಕ/ಬೋಧಕೇತರ ಸಿಬ್ಬಂದಿ ವೇತನ ವಿತರಣೆಗೆ ಸಂಬಂಧಿಸಿದಂತೆ 4.00ಕೋಟಿರೂಪಾಯಿಗಳನ್ನು [ನಾಲ್ಕು ಕೋಟಿರೂಪಾಯಿಗಳುಮಾತ್ರ] ಈ ಕೆಳಕಂಡ ಷರತ್ತನ್ನು ವಿಧಿಸಿ ಸಾದಿಲ್ವಾರು ನಿಧಿಯಿಂದ ಭರಿಸಲು ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಸರ್ಕಾರವು ಆಡಳಿತಾತ್ಮಕ ಅನುಮತಿ ನೀಡಿದೆ.

**ಷರತ್ತುಗಳು:–**

(ಅ) ಮಂಜೂರು ಮಾಡಲಾದ ಮೊಗಲಗನ್ನು ಮೊದಲು ಸಾದಿಲ್ವಾರು ನಿಧಿಯಿಂದ ಲೆಕ್ಕಶೀರ್ಷಿಕೆ 8000–00–226–0–00 ಇದರಲ್ಲಿ ಬಿಡುಗಡೆ ಮಾಡಿ, ನಂತರ ಲೆಕ್ಕ ಶೀರ್ಷಿಕೆ 2202–00–112–0–02[ಯೋಜನೆ] ಇದರಡಿಯಲ್ಲಿ ಪೂರಕ ಅಂದಾಜುಗಳಲ್ಲಿ ನಿಧಿಗೆ ಮರು ತುಂಬಲಾಗುವುದು.

(ಆ) ಆರ್ಥಿಕ ಇಲಾಖೆಯು ಈ ಮೊಬಲಗನ್ನು ಸಾದಿಲ್ವಾರು ನಿಧಿಯಿಂದ ಬಿಡುಗಡೆ ಮಾಡಿ ಪ್ರತ್ಯೇಕ ಆದೇಶವನ್ನು ಹೊರಡಿಸುವುದು.

(ಇ) ಆರ್ಥಿಕ ಇಲಾಖೆಯ ಈ ಪ್ರತ್ಯೇಕ ಆದೇಶವಿಲ್ಲದೆ ಈ ಸದರಿ ಆದೇಶದ ಮೇಲೆಯೇ ಮೊಬಲಗನ್ನು ಪಡೆಯುವಂತಿಲ್ಲ.

(ಈ)ಹಣ ಪಡೆಯುವ ಅಧಿಕಾರಿಯು ಸಾದಿಲ್ವಾರು ನಿಧಿಯಿಂದ ಹಣವನ್ನು ಪಡೆಯುವ ಖಜಾನೆಗೆ ಸಲ್ಲಿಸಿದಾಗ ಇಲಾಖೆಯ ಆದೇಶಕ್ಕೆ ಆರ್ಥಿಕ ಇಲಾಖೆಯು ಹೊರಡಿಸಿದ ಪ್ರತ್ಯೇಕ ಆದೇಶವನ್ನು ಲಗತ್ತಿಸಿದ ನಂತರವೇ ಖಜಾನೆಯ ಹಣವನ್ನು ಬಿಡುಗಡೆ ಮಾಡಲು ಕ್ರಮ ತೆಗೆದುಕೊಳ್ಳುವುದು.

(6) ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ ಆಇ 902ವೆಚ್ಚ–8/2007: ದಿನಾಂಕ: 11–09–2007 ರಲ್ಲಿನ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ**
ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ
ಸರ್ಕಾರದ ಸಹ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ಯೋಜನೆ)

ಪಿ.ಆರ್. 1711

ವಿಷಯ: ಕರ್ನಾಟಕ ಶಿಕ್ಷಣ ಕಾಯ್ದೆ – ಕಾನೂನುಗಳ ಆವೃತ್ತಿಯನ್ನು ಪ್ರಕಟಿಸುವ ಸಂಬಂಧ ಸಮಿತಿಯನ್ನು ರಚಿಸುವ ಕುರಿತು.

ಓದಲಾಗಿದೆ:– 1. ದಿನಾಂಕ: 01–12–2006, ಸಂಖ್ಯೆ ಇಡಿ 22 ವಿವಿಧ 2006 ರ ಸರ್ಕಾರಿ ಆದೇಶ.

2. ದಿನಾಂಕ:18.4.2007, ಸಂಖ್ಯೆ:ಆಶಾ/ಸಾ.ಶಿ.ಇ.ಕಾ ಆ.ಪ್ರ/1/2007–08ರ, ನಿರ್ದೇಶಕರು[ಪ್ರೌಢ ಶಿಕ್ಷಣ] ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪತ್ರ

ಪ್ರಸ್ತಾವನೆ:

1. ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆಗೆ ಸಂಬಧಿಸಿದಂತೆ ಹೊರಡಿಸಲಾಗಿರುವ ಪ್ರಮುಖ ಕಾನೂನುಗಳು, ಆದೇಶಗಳು, ಅಧಿ ನಿಯಮಗಳು/ನಿಯಮಗಳು/ಅಧಿಸೂಚನೆಗಳು/ ಸುತ್ತೋಲೆಗಳು ಮುಂತಾದವುಗಳನ್ನು ಸಂಗ್ರಹಿಸಿ ಕ್ರಮಬದ್ಧವಾಗಿ ಅವುಗಳನ್ನು ಕ್ರೋಢೀಕರಿಸಿ ಅವುಗಳನ್ನು ಒಂದು ಅಥವಾ ಒಂದಕ್ಕಿಂತ ಹೆಚ್ಚು ಸಂಪುಟಗಳಲ್ಲಿ[VOLUME] ಪ್ರಕಟಿಸುವುದಕ್ಕೆ ಸಂಬಂಧಿಸಿದಂತೆ ಮೇಲೆ ಓದಲಾದ ಕ್ರಮ ಸಂಖ್ಯೆ 1 ರ ಸರ್ಕಾರಿ ಆದೇಶದಲ್ಲಿ ಶ್ರೀ ಕೆ.ಗಂಗಪ್ಪ ಗೌಡ, ಸಹನಿರ್ದೇಶಕರು, ಬೆಂಗಳೂರು ವಿಭಾಗ ಇವರನ್ನು ನೋಡಲ್ ಅಧಿಕಾರಿಯಾಗಿ ನೇಮಿಸಲಾಗಿದೆ.

ಅಲ್ಲದೆ ಸಾರ್ವಜನಿಕ ಶಿಕ್ಷಣ ಇಲಾಖೆಯ ಇತಿಹಾಸ ಮತ್ತು ಬೆಳವಣಿಗೆಗಳ ಬಗೆಯ ಮಾಹಿತಿಗಳನ್ನೂ ಸಂಗ್ರಹಿಸಿ, ಸೂಕ್ತವಾಗಿ ಕ್ರೋಢೀಕರಿಸಿ ಪ್ರಕಟಿಸಬೇಕಾಗಿರುವುದರಿಂದ ಹಾಗೂ ಇದರ ಬಗ್ಗೆ ಸೂಕ್ತ ಕ್ರಮ ಕೈಗೊಳ್ಳುವಲ್ಲಿ ಇಲಾಖೆಯಲ್ಲಿ ನುರಿತ ಮತ್ತು ಅನುಭವಿ ಅಧಿಕಾರಿಗಳ ಸಮಿತಿಯನ್ನು ರಚಿಸಿ ಅತೀ ಶೀಘ್ರವಾಗಿ ಮೇಲ್ಕಂಡ ಮಾಹಿತಿಗಳನ್ನು ಸಂಪುಟ ರೂಪದಲ್ಲಿ ಪ್ರಕಟಿಸುವಲ್ಲಿ ಈ ಕೆಳಕಂಡವರನ್ನೊಳಗೊಂಡ ಸಮಿತಿಯನ್ನು ರಚಿಸುವಂತೆ ನಿರ್ದೇಶಕರು, [ಪ್ರೌಢ ಶಿಕ್ಷಣ] ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರು ಕೋರಿರುತ್ತಾರೆ.

ಶ್ರೀಯುತರುಗಳಾದ:–

| | | |
|---|---|---|
| 1. | ಶ್ರೀ.ಜೆ.ಭಾಸ್ಕರಯ್ಯ, ನಿವೃತ್ತ ನಿರ್ದೇಶಕರು | ಅಧ್ಯಕ್ಷರು |
| 2. | ಶ್ರೀ.ಚಿದ್ರೆ ಶಂಕರಯ್ಯ ಸ್ವಾಮಿ, ನಿರ್ದೇಶಕರು[ಪ್ರೌಢ ಶಿಕ್ಷಣ] | ಸದಸ್ಯರು |
| 3. | ಶ್ರೀ.ಬಿ.ಕೆ.ನಾಗರಾಜರಾವ್, ನಿವೃತ್ತ ಸಹ ನಿರ್ದೇಶಕರು | ಸದಸ್ಯರು |
| 4. | ಶ್ರೀ.ವೆಂಕಟಾಚಲಪತಿ ನಿವೃತ್ತ ಉಪನಿರ್ದೇಶಕರು | ಸದಸ್ಯರು |
| 5. | ಶ್ರೀ.ಎನ್.ಎಲ್ ಗಂಗಾಧರ ಗೌಡ, ನಿವೃತ್ತ ಉಪನಿರ್ದೇಶಕರು | ಸದಸ್ಯರು |
| 6. | ಶ್ರೀ.ಡಿ.ರಾಜರಾಂ ನಿವೃತ್ತ ಸಹನಿರ್ದೇಶಕರು | ಸದಸ್ಯರು |
| 7. | ಶ್ರೀ.ಸಿದ್ಧಲಿಂಗಪ್ಪ [ಬೋಧಕೇತರ] ನಿವೃತ್ತ ಉಪನಿರ್ದೇಶಕರು | ಸದಸ್ಯರು |
| 8. | ಶ್ರೀ.ಸುಧಾಕರ್[ಬೋಧಕೇತರ] ನಿವೃತ್ತ ಹಿರಿಯ ಸಹಾಯಕ ನಿರ್ದೇಶಕರು | ಸದಸ್ಯರು |
| 9. | ಶ್ರೀ.ಸಿ.ಎನ್.ವಿಜಯಕುಮಾರ್, ಉಪನಿರ್ದೇಶಕರು,[ಕೆ.ಎಸ್.ಇ.ಇ.ಬಿ] | ಸದಸ್ಯರು |
| 10. | ಶ್ರೀ.ಕೆ.ಎಂ.ಪುರುಷೋತ್ತಮ ಕುಮಾರ್, ಉಪನ್ಯಾಸಕರು ಡಯಟ್ ಬೆಂಗಳೂರು ನಗರ | ಸದಸ್ಯರು |
| 11. | ಶ್ರೀ.ಕೆ.ಗಂಗಪ್ಪಗೌಡ, ಸಹನಿರ್ದೇಶಕರು,ಬೆಂಗಳೂರು ವಿಭಾಗ, ಬೆಂಗಳೂರು | ನೋಡಲ್ ಅಧಿಕಾರಿ |

2. ನಿರ್ದೇಶಕರು[ಪ್ರೌಢಶಿಕ್ಷಣ], ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು, ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಇಡಿ:168:ಯೋಯೋಕಾ 2007 ಬೆಂಗಳೂರು, ದಿನಾಂಕ: 16.05.2007**

**[ಇಡಿ: 76 :ಸ್ವೀಮರ(ಯುನಿಕ್) 2007, ದಿನಾಂಕ:16.05.2007]**

ಸಾರ್ವಜನಿಕ ಶಿಕ್ಷಣ ಇಲಾಖೆಯ ಇತಿಹಾಸ ಮತ್ತು ಬೆಳವಣಿಗೆಗಳ ಮಾಹಿತಿಗಳನ್ನು ಸಂಗ್ರಹಿಸಿ ಸೂಕ್ತವಾಗಿ ಕ್ರೋಢೀಕರಿಸಿ ಅತೀ ಶೀಘ್ರವಾಗಿ ಸಂಪುಟ ರೂಪದಲ್ಲಿ ಪ್ರಕಟಿಸಲು ಈ ಕೆಳಕೆಂಡವರನ್ನೊಳಗೊಂಡ ಸಮಿತಿಯನ್ನು ರಚಿಸಲು ಸರ್ಕಾರವು ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಅನುಮೋದನೆ ನೀಡಿದೆ.

| | |
|---|---|
| 1. ಶ್ರೀ.ಜೆ.ಭಾಸ್ಕರಯ್ಯ, ನಿವೃತ್ತ ನಿರ್ದೇಶಕರು | ಅಧ್ಯಕ್ಷರು |
| 2. ಶ್ರೀ.ಚಿದ್ರೆ ಶಂಕರಯ್ಯ ಸ್ವಾಮಿ, ನಿರ್ದೇಶಕರು[ಪ್ರೌಢ ಶಿಕ್ಷಣ] | ಸದಸ್ಯರು |
| 3. ಶ್ರೀ.ಬಿ.ಕೆ.ನಾಗರಾಜರಾವ್, ನಿವೃತ್ತ ಸಹ ನಿರ್ದೇಶಕರು | ಸದಸ್ಯರು |
| 4. ಶ್ರೀ.ವೆಂಕಟಾಚಲಪತಿ ನಿವೃತ್ತ ಉಪನಿರ್ದೇಶಕರು | ಸದಸ್ಯರು |
| 5. ಶ್ರೀ.ಎನ್.ಎಲ್ ಗಂಗಾಧರ ಗೌಡ, ನಿವೃತ್ತ ಉಪನಿರ್ದೇಶಕರು | ಸದಸ್ಯರು |
| 6. ಶ್ರೀ.ಡಿ.ರಾಜರಾಂ ನಿವೃತ್ತ ಸಹನಿರ್ದೇಶಕರು | ಸದಸ್ಯರು |
| 7. ಶ್ರೀ.ಸಿದ್ಧಲಿಂಗಪ್ಪ [ಬೋಧಕೇತರ] ನಿವೃತ್ತ ಉಪನಿರ್ದೇಶಕರು | ಸದಸ್ಯರು |
| 8. ಶ್ರೀ.ಸುಧಾಕರ್[ಬೋಧಕೇತರ] ನಿವೃತ್ತ ಹಿರಿಯ ಸಹಾಯಕ ನಿರ್ದೇಶಕರು | ಸದಸ್ಯರು |
| 9. ಶ್ರೀ.ಸಿ.ಎನ್.ವಿಜಯಕುಮಾರ್, ಉಪನಿರ್ದೇಶಕರು,[ಕೆ.ಎಸ್.ಇ.ಇ.ಬಿ] | ಸದಸ್ಯರು |

10. ಶ್ರೀ.ಕೆ.ಎಂ.ಪುರುಷೋತ್ತಮ ಕುಮಾರ್, ಉಪನ್ಯಾಸಕರು ಡಯಟ್ ಬೆಂಗಳೂರು ನಗರ — ಸದಸ್ಯರು
11. ಶ್ರೀ.ಕೆ.ಗಂಗಪ್ಪಗೌಡ, ಸಹನಿರ್ದೇಶಕರು,ಬೆಂಗಳೂರು ವಿಭಾಗ, ಬೆಂಗಳೂರು — ನೋಡಲ್ ಅಧಿಕಾರಿ

ಸಮಿತಿಯು ಅಂದಾಜು ಎರಡು (2) ತಿಂಗಳಲ್ಲಿ 1950 ರಿಂದ ಶಿಕ್ಷಣ ಕ್ಷೇತ್ರಕ್ಕೆ[ಪದವಿ ಪೂರ್ವ ಕಾಲೇಜ್‌ವರೆಗೆ] ಸಂಬಂಧಿಸಿದ ಪ್ರಮುಖ ಸರ್ಕಾರಿ, ಆಯುಕ್ತರು, ನಿರ್ದೇಶಕರ ಆದೇಶಗಳು /ಅಧಿಸೂಚನೆಗಳು/ಸುತ್ತೋಲೆಗಳು/ ಅಧಿನಿಯಮಗಳು/ಕಾನೂನುಗಳು/ನಿಯಮಗಳು ಮುಂತಾದವುಗಳನ್ನು ಸಂಗ್ರಹಿಸಿ ಸಂಪುಟವನ್ನು ತಯಾರಿಸಿ ಸರ್ಕಾರಕ್ಕೆ ಸಲ್ಲಿಸುವುದು.

ಸಮಿತಿಯೊಂದಿಗೆ ಅವಶ್ಯಕತೆಯ ಆಧಾರದ ಮೇಲೆ ವಿಷಯಾಧಾರಿತವಾಗಿ ವಿಶೇಷ ಪರಿಣಿತಿ ಹೊಂದಿದವರನ್ನು ಆಹ್ವಾನಿಸುವುದು ಹಾಗೂ ಸಮಿತಿಯ ಕಾರ್ಯನಿರ್ವಹಣೆಗೆ ಬೇಕಾಗುವ 3–4 ನಾಲ್ಕು ಸಹಾಯಕ ಸಿಬ್ಬಂದಿಗಳವರನ್ನು ನಿಯೋಜಿಸಿಕೊಂಡು ಕಾರ್ಯ ನಿರ್ವಹಿಸುವುದು.

ಸಮಿತಿಯ ಕಾರ್ಯನಿರ್ವಹಣೆಗೆ ತಗಲು ವೆಚ್ಚವನ್ನು ಕೇಂದ್ರೀಯ ದಾಖಲಾತಿ ಘಟಕದಿಂದ ಭರಿಸುವಂತೆ ಅನುಮತಿಯನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು
ಅವರ ಹೆಸರಿನಲ್ಲಿ,
**ಕೆ. ಶ್ರೀಕಂಠೇಶ್ವರ**
ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ಯೋಜನೆ)

ಪಿ.ಆರ್. 1117

**ವಿಷಯ:** ರಾಜ್ಯದ ಸರ್ಕಾರಿ ಪ್ರೌಢಶಾಲೆ ಹಾಗೂ ಪದವಿ ಪೂರ್ವ ಕಾಲೇಜುಗಳ ಅಂಕಿಅಂಶಗಳ ಸಂಗ್ರಹಣೆಗಾಗಿ ಪಂಚ ಸದಸ್ಯರನ್ನು ಒಳಗೊಂಡ **"ರಾಜ್ಯ ಸಂಪನ್ಮೂಲ ತಂಡ"** ವನ್ನು ರಚಿಸುವ ಬಗ್ಗೆ.

**ಓದಲಾಗಿದೆ: –** ದಿ. 16.03.2007. ಅ.ಸ.ಪ.ಸಂಖ್ಯೆ:F-16–92/2005– Sch-1/Vol-III, ರ, ಜಂಟಿ ಕಾರ್ಯದರ್ಶಿಗಳು, ಪ್ರೌಢ ಶಿಕ್ಷಣ ಮಾನವ ಸಂಪನ್ಮೂಲ ಅಭಿವೃದ್ಧಿ ಮಂತ್ರಾಲಯ, ಭಾರತ ಸರ್ಕಾರ ನವದೆಹಲಿ ಇವರ ಪತ್ರ.

**ಪ್ರಸ್ತಾವನೆ:**

(1) ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಮೇಲೆ ಓದಲಾದ ಜಂಟಿ ಕಾರ್ಯದರ್ಶಿಗಳು, ಪ್ರೌಢ ಶಿಕ್ಷಣ ಮಾನವ ಸಂಪನ್ಮೂಲ ಅಭಿವೃದ್ಧಿ ಮಂತ್ರಾಲಯ, ಭಾರತ ಸರ್ಕಾರ ನವದೆಹಲಿರವರ ಪತ್ರದಲ್ಲಿ ಹನ್ನೊಂದನೇ ಪಂಚವಾರ್ಷಿಕ ಯೋಜನೆಯಡಿ ಪ್ರೌಢಶಾಲೆಗಳಿಗೆ ಮೂಲಸೌಕರ್ಯಗಳನ್ನು ಅಭಿವೃದ್ಧಿಪಡಿಸಲು "Scheme for Universlization Access and Improvement of Quality at the Secondary Stage (SUCCESS)" ಎಂಬ ಯೋಜನೆಯನ್ನು ಸಿದ್ಧಪಡಿಸಲಾಗಿದೆ. ಜೊತೆಗೆ ಪ್ರೌಢ ಶಿಕ್ಷಣ ಮತ್ತು ಪದವಿ ಪೂರ್ವ ಕಾಲೇಜು ಶಿಕ್ಷಣ ಹಂತಗಳಲ್ಲಿ ಒಟ್ಟು ದಾಖಲಾತಿ ಪ್ರಮಾಣವನ್ನು ಹಾಲಿ ಇರುವ 40% ರಿಂದ 65% ರವರೆಗೆ ಹೆಚ್ಚಿಸಲು ಸಹ ಪ್ರಸ್ತಾಪಿಸಿದೆ.

(2) ಈ ಯೋಜನೆಯನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸಲು ಪ್ರೌಢಶಾಲಾ ಹಂತ ದಲ್ಲಿ ಮೂಲಭೂತ ಸೌಕರ್ಯಗಳು, ಮಾನವ ಸಂಪನ್ಮೂಲ ಮುಂತಾದ ಅನೇಕ ಮಾಹಿತಿಗಳ ಸಂಗ್ರಹಣೆ ತುಂಬಾ ಪ್ರಮುಖವಾದ ವಿಷಯವಾಗಿರುತ್ತದೆ. ಇದಕ್ಕಾಗಿ ಮೇಲ್ಕಂಡ ಅಂಕಿ ಅಂಶಗಳ ಸಂಗ್ರಹಣೆಗಾಗಿ ಪರಿಣಿತಿ ಹೊಂದಿರುವ ಈ ಕೆಳಕಂಡ ಅಧಿಕಾರಿಗಳನ್ನೊಳಗೊಂಡ **"ರಾಜ್ಯ ಸಂಪನ್ಮೂಲ ತಂಡ"** ವನ್ನು ರಚಿಸುವ ಅವಶ್ಯಕತೆ ಇರುತ್ತದೆ.

1) ಆಯುಕ್ತರು/ನಿರ್ದೇಶಕರು[ಸೆಕೆಂಡರಿ ಶಿಕ್ಷಣ][ಪದನಿಮಿತ್ತ] — ಸಮನ್ವಯಾಧಿಕಾರಿ
2) ಜಂಟಿನಿರ್ದೇಶಕರು[ಯೋಜನೆ] ಶಾಲಾಶಿಕ್ಷಣ[ಪದನಿಮಿತ್ತ] — ನೋಡಲ್‌ಅಧಿಕಾರಿ
3) ರಾಜ್ಯಪರೀಕ್ಷಾಮಂಡಳಿ/ಇಂಟರ್ ಮೀಡಿಯೆಟ್ ಮಂಡಳಿ ಒಬ್ಬ ಹಿರಿಯ ಅಧಿಕಾರಿ — ಸದಸ್ಯರು
4) ಸೆಕಂಡರಿ ಮತ್ತು ಪದವಿ ಪೂರ್ವ ಶಿಕ್ಷಣ ಯೋಜನೆ ಮತ್ತು ಆಡಳಿತ ನೋಡಿಕೊಳ್ಳುತ್ತಿರುವ ಇಬ್ಬರು ಜಿಲ್ಲಾ ಶಿಕ್ಷಣಾಧಿಕಾರಿಗಳು — ಸದಸ್ಯರು

(3) ಮೇಲ್ಕಂಡ ಅಂಶಗಳನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಇಡಿ:170:ಯೋಯೋಕಾ 2007 ಬೆಂಗಳೂರು, ದಿನಾಂಕ: 16.05.2007**

[**ಸ್ವೀಮರ: ಇಡಿ:75 :(ಯುನಿಕ್) 2007, ದಿನಾಂಕ: 16.05.2007**]

(4) ಹನ್ನೊಂದನೇ ಪಂಚವಾರ್ಷಿಕ ಯೋಜನೆಯ ಕಾರ್ಯಕ್ರಮವಾದ "Scheme for Universlization Access and Improvement of Quality at the Secondary Stage (SUCCESS)"ಎಂಬ ಯೋಜನೆಯಡಿ ಪ್ರೌಢ ಶಿಕ್ಷಣಕ್ಕೆ ಸಂಬಂಧಿಸಿದ ಅನೇಕ ಮಾಹಿತಿಯನ್ನು [ಉದಾ:–ಮೂಲಭೂತ ಸೌಕರ್ಯಗಳು, ಮಾನವ ಸಂಪನ್ಮೂಲ ಇತ್ಯಾದಿಗಳು]

ಸಂಗ್ರಹಿಸಿ ಮತ್ತು ವಿವರವಾಗಿ ವಿಶ್ಲೇಷಿಸಲು ಈ ಕೆಳಕಂಡ ಅಧಿಕಾರಿಗಳನ್ನೊಳಗೊಂಡ "ರಾಜ್ಯ ಸಂಪನ್ಮೂಲ ತಂಡ"ವನ್ನು ರಚಿಸಲು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಅನುಮತಿ ನೀಡಲಾಗಿದೆ.

1. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು — ಅಧ್ಯಕ್ಷರು
2. ಜಂಟಿ ನಿರ್ದೇಶಕರು[ಪ್ರೌಢಶಿಕ್ಷಣ], ಆಯುಕ್ತರ ಕಛೇರಿ ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು — ನೋಡಲ್ ಅಧಿಕಾರಿ
3. ಜಂಟಿ ನಿರ್ದೇಶಕರು[ಆಡಳಿತ] ಆಯುಕ್ತರ ಕಛೇರಿ ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರು — ನೋಡಲ್ ಅಧಿಕಾರಿ
4. ಉಪ ನಿರ್ದೇಶಕರು [ಆಡಳಿತ] ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ, ಬೆಂಗಳೂರು — ಸದಸ್ಯರು
5. ಉಪ ನಿರ್ದೇಶರು[ಯೋಜನೆ] ಮತ್ತು ಉಪ ನಿರ್ದೇಶಕರು [ಅಂಕಿ ಅಂಶ] ಆಯುಕ್ತರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು — ಸದಸ್ಯರುಗಳು

ಮೇಲ್ಕಂಡ ಅಧಿಕಾರಿಗಳನ್ನೊಳಗೊಂಡ ತಂಡವು ಈ ಕೆಳಕಂಡ ಕಾರ್ಯಗಳನ್ನು ನಿರ್ವಹಿಸತಕ್ಕದ್ದು.

ಅ. ಪ್ರೌಢ ಮತ್ತು ಪದವಿ ಪೂರ್ವ ಶಾಲೆಗಳ ನಕ್ಷೆಯನ್ನು [ಮ್ಯಾಪಿಂಗ್] ತಯಾರಿಲು ಅಂಕಿ ಅಂಶಗಳನ್ನು ಸಂಗ್ರಹಿಸುವುದು.

ಆ. ಆ ಅಂಕಿ ಅಂಶಗಳನ್ನು ವಿವರವಾಗಿ 'National University of Educational Planning and Administration" ಸಂಸ್ಥೆಯವರು ನೀಡುವ ಮಾದರಿಯಂತೆ ವಿಶ್ಲೇಷಣೆ ನಡೆಸುವುದು.

ಇ. ಮಾಹಿತಿ ಸಂಗ್ರಹಣೆಗಾಗಿ ಈಗಾಗಲೇ ಅಸ್ತಿತ್ವದಲ್ಲಿರುವ ' District Information System for Education" ಸಂಸ್ಥೆಗೆ ವಹಿಸತಕ್ಕದ್ದು.

ಉ. ಕಾಲ ಕಾಲಕ್ಕೆ 'National University of Educational Planning and Administration[NUEPA]" ಸಂಸ್ಥೆಯವರು ನಡೆಸುವ ಕಾರ್ಯಾಗಾರದಲ್ಲಿ ಭಾಗವಹಿಸಿ ಅಗತ್ಯ ಮಾಹಿತಿಗಳನ್ನು ಸಂಗ್ರಹಣೆ ಮಾಡಿ ಒದಗಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1059

**ಕೆ. ಶ್ರೀಕಂಠೇಶ್ವರ**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ಯೋಜನೆ)

**ವಿಷಯ:** 2007–08ನೇ ಸಾಲಿಗೆ ರಾಜ್ಯ ವಲಯ ಯೋಜನೇತರದಡಿ ಶಾಲಾ ಕೊಠಡಿ ನಿರ್ಮಾಣಕ್ಕೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:–** ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ: ಯೋ 7 ಹೆ.ಅ.ಬಿ 67/2006–07/ದಿ. 16.03.2007.

**ಪ್ರಸ್ತಾವನೆ:**

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರು 2007–08ನೇ ಸಾಲಿಗೆ ಲೆಕ್ಕಶೀರ್ಷಿಕೆ 2202–01–053–0–01–132 [ಯೋಜನೇತರ] ದಡಿ ಒದಗಿಸಲಾಗಿರುವ ಮೊತ್ತದಲ್ಲಿ ದಾವಣಗೆರೆ ಜಿಲ್ಲೆ, ಹರಪನಹಳ್ಳಿ ತಾಲ್ಲೂಕು, ಅಣಜಿಗೆರೆ ಗ್ರಾಮದ ಸರ್ಕಾರಿ ಪ್ರೌಢಶಾಲೆಯ ಕಟ್ಟಡ ಕಾಮಗಾರಿಯ ಉಳಿಕೆ ಮೊತ್ತ 8.50ಲಕ್ಷರೂಗಳು, ದಾವಣಗೆರೆಯ ರಾಜನಹಳ್ಳಿ ಸೀತಮ್ಮ ಸರ್ಕಾರಿ ಬಾಲಕಿಯರ ಪದವಿ ಪೂರ್ವ ಕಾಲೇಜಿನ ಕಾಮಗಾರಿ ಬಾಬ್ತು, 6.20ಲಕ್ಷರೂಗಳು, ಯಲ್ಬುರ್ಗಾ ನಗರದ ಶಾಸಕರ ಮಾದರಿ ಪ್ರಾಥಮಿಕ ಶಾಲೆಯ ಕಟ್ಟಡ ಕಾಮಗಾರಿ ಬಾಬ್ತು, 20.00ಲಕ್ಷರೂಗಳು, ಯಲ್ಬುರ್ಗಾ ನಗರದ ಸರ್ಕಾರಿ ಪ್ರೌಢಶಾಲೆಗಳ ಹೆಚ್ಚುವರಿ ಕೊಠಡಿ ನಿರ್ಮಾಣದ ಕಾಮಗಾರಿ ಬಾಬ್ತು 37.19ಲಕ್ಷರೂಗಳು, ಮತ್ತು ದೇವರ ಜೀವನಹಳ್ಳಿ ಸರ್ಕಾರಿ ಉರ್ದು ಪ್ರೌಢಶಾಲೆ ಕಟ್ಟಡ ದುರಸ್ತಿಗಾಗಿ 5.00ಲಕ್ಷರೂಗಳನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಇಡಿ:167:ಯೋಸಕಾ 2007 ಬೆಂಗಳೂರು, ದಿನಾಂಕ: 02.05.2007**

**[ಸ್ವೀಮರ: ಇಡಿ: 67 :(ಯುನಿಕ್) 2007, ದಿನಾಂಕ: 02.05.2007]**

2007–08ನೇ ಸಾಲಿಗೆ ಲೆಕ್ಕಶೀರ್ಷಿಕೆ 2202–01–053–0–01–132 [ಯೋಜನೇತರ] ದಡಿ ಒದಗಿಸಲಾಗಿರುವ ಮೊತ್ತದಲ್ಲಿ ಈ ಕೆಳಕಂಡ ಕಾಮಗಾರಿಗಳಿಗೆ ಅವುಗಳ ಮುಂದೆ ತೋರಿಸಿರುವ ಅನುದಾನದವನ್ನು ಕಾರ್ಯಕ್ರಮ ಅನುಷ್ಠಾನಕ್ಕಾಗಿ ಸಂಬಂಧಪಟ್ಟ ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಯವರಿಗೆ ಬಿಡುಗಡೆ ಮಾಡಲಾಗಿದೆ.

[ರೂ.ಲಕ್ಷಗಳಲ್ಲಿ]

| ಕ್ರ.ಸಂ | ಕಾಮಗಾರಿ ವಿವರ | ಬಿಡುಗಡೆ ಮಾಡುತ್ತಿರುವ ಅನುದಾನ |
|---|---|---|
| 1. | ದಾವಣಗೆರೆ ಜಿಲ್ಲೆ, ಹರಪನಹಳ್ಳಿ ತಾಲ್ಲೂಕು ಅಣಜಿಗೆರೆ ಗ್ರಾಮದ ಸರ್ಕಾರಿ ಪ್ರೌಢ ಶಾಲೆಯ ಕಾಮಗಾರಿ ಬಾಬ್ತು | 8.50 |
| 2. | ದಾವಣಗೆರೆಯ ರಾಜನಹಳ್ಳಿ ಸೀತಮ್ಮ ಸರ್ಕಾರಿ ಬಾಲಕಿಯರ ಪದವಿ ಪೂರ್ವ ಕಾಲೇಜಿನ ಕಾಮಗಾರಿ ಬಾಬ್ತು | 6.20 |

[ರೂ.ಲಕ್ಷಗಳಲ್ಲಿ]

| ಕ್ರ.ಸಂ | ಕಾಮಗಾರಿ ವಿವರ | ಬಿಡುಗಡೆ ಮಾಡುತ್ತಿರುವ ಅನುದಾನ |
|---|---|---|
| 3. | ಕೊಪ್ಪಳ ಜಿಲ್ಲೆ ಯಲ್ಬುರ್ಗಾ ಶಾಸಕರ ಮಾದರಿ ಪ್ರಾಥಮಿಕ ಶಾಲೆಯ ಕಟ್ಟಡ ಕಾಮಗಾರಿಗಾಗಿ | 20.00 |
| 4. | ಕೊಪ್ಪಳ ಜಿಲ್ಲೆ ಯಲ್ಬುರ್ಗಾ ನಗರದ ಸರ್ಕಾರಿ ಪ್ರೌಢ ಶಾಲೆಗಳ ಹೆಚ್ಚುವರಿ ಕೊಠಡಿ ನಿರ್ಮಾಣದ ಕಾಮಗಾರಿ ಪೂರ್ಣಗೊಳಿಸಲು | 37.19 |
| 5. | ಬೆಂಗಳೂರು ನಗರ ಜಿಲ್ಲೆ ದೇವರ ಜೀವನಹಳ್ಳಿ ಸರ್ಕಾರಿ ಉರ್ದು ಪ್ರೌಢಶಾಲೆಯ ಸೇರ್ಪಡೆ ಮತ್ತು ಮಾರ್ಪಾಡಿಗಾಗಿ | 5.00 |
| | ಒಟ್ಟು | **76.89** |
| | **[ಒಟ್ಟು ಎಪ್ಪತ್ತಾರುಲಕ್ಷದ ಎಂಭತ್ತೊಂಭತ್ತುಸಾವಿರಗಳು ಮಾತ್ರ]** | |

ಈ ಮೊತ್ತವನ್ನು ಡ್ರಾ ಮಾಡುವ ಅಧಿಕಾರವನ್ನು ಸಂಬಂಧಿಸಿದ ಜಿಲ್ಲಾ ಮುಖ್ಯ ಲೆಕ್ಕಾಧಿಕಾರಿಯವರಿಗೆ ನೀಡಲಾಗಿದೆ.

1. ತಿಂಗಳಿಗೊಮ್ಮೆ ಕಟ್ಟಡ ನಿರ್ಮಾಣದ ಕಾಮಗಾರಿ ಅಭಿವೃದ್ಧಿಯನ್ನು ಪರಿಶೀಲಿಸಿ ಸರ್ಕಾರಕ್ಕೆ ವರದಿಯನ್ನು ಸಲ್ಲಿಸಲು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು, ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ, ಮತ್ತು ಗುಲ್ಬರ್ಗಾ ಇವರಿಗೆ ಆದೇಶಿಸಲಾಗಿದೆ.
2. ಕಟ್ಟಡ ನಿರ್ಮಾಣ ಕಾರ್ಯವನ್ನು ವಹಿಸುವಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ನಿಯಮಗಳನ್ನು ಕಡ್ಡಾಯವಾಗಿ ಪಾಲಿಸತಕ್ಕದ್ದು.

ಪ್ರತಿ ಮಾಹೆಯ ಕಾಮಗಾರಿಯ ಪ್ರಗತಿ ವರದಿಯನ್ನು ಆಯಾ ಮಾಹೆಯ ಎಂ.ಎಂ.ಆರ್ ವರದಿಯಲ್ಲಿ ನಮೂದಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು
ಅವರ ಹೆಸರಿನಲ್ಲಿ,

ಪಿ.ಆರ್. 1060

**ಕೆ. ಶ್ರೀಕಂಠೇಶ್ವರ**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ಯೋಜನೆ)

ವಿಷಯ:– ಹಾಸನ, ಕೆ.ಆರ್.ಪೇಟೆ ಮತ್ತು ಚಾಮರಾಜನಗರ ಸರ್ಕಾರಿ ತಾಂತ್ರಿಕ ಮಹಾ ವಿದ್ಯಾಲಯಗಳ ಕಟ್ಟಡ ಕಾಮಗಾರಿಗಳಿಗೆ ಆಡಳಿತಾತ್ಮಕ ಮಂಜೂರಾತಿ ನೀಡುವ ಕುರಿತು.

ಓದಲಾಗಿದೆ:–
1. ಸರ್ಕಾರದ ಆದೇಶ ಸಂಖ್ಯೆ:ಇಡಿ 60 ಟಿ.ಇ.ಸಿ 2007/ದಿನಾಂಕ 25–05–2007
2. ಸರ್ಕಾರದ ಆದೇಶ ಸಂಖ್ಯೆ:ಇಡಿ:60:ಟಿ.ಇ.ಸಿ 2007(1)/ದಿನಾಂಕ:25–05–2007
3. ಸರ್ಕಾರದ ಆದೇಶ ಸಂಖ್ಯೆ:ಇಡಿ:60:ಟಿ.ಇ.ಸಿ 2007(2)/ದಿನಾಂಕ:25–05–2007
4. ಮುಖ್ಯ ಅಭಿಯಂತರರು, ಸಂಪರ್ಕ ಮತ್ತು ಕಟ್ಟಡ ವಿಭಾಗ [ದಕ್ಷಿಣ], ಬೆಂಗಳೂರು ರವರ ಪತ್ರ ಸಂಖ್ಯೆ: CE/C&B(S)/Bldgs/AE/2007–08/ ದಿನಾಂಕ: 29.05.2007

ಪ್ರಸ್ತಾವನೆ:–

1. ಮೇಲೆ (1), (2) ಮತ್ತು (3) ರಲ್ಲಿ ಓದಲಾದ ಸರ್ಕಾರದ ಆದೇಶಗಳಲ್ಲಿ 2007–08ನೇ ಸಾಲಿಗೆ ಕ್ರಮವಾಗಿ ಚಾಮರಾಜನಗರ, ಹಾಸನ ಮತ್ತು ಕೆ.ಆರ್.ಪೇಟೆಯಲ್ಲಿ ಸರ್ಕಾರಿ ತಾಂತ್ರಿಕ ಮಹಾವಿದ್ಯಾಲಯವನ್ನು ಪ್ರಾರಂಭಿಸಲು ಅನುಮೋದನೆ ನೀಡಲಾಗಿದೆ.

2. ಮೇಲೆ (4) ರಲ್ಲಿ ಓದಲಾದ ಮುಖ್ಯ ಅಭಿಯಂತರರು, ಸಂಪರ್ಕ ಮತ್ತು ಕಟ್ಟಡ ವಿಭಾಗ[ದಕ್ಷಿಣ], ಬೆಂಗಳೂರು ಇವರ ಪತ್ರದಲ್ಲಿ ಕಾರ್ಯದರ್ಶಿಗಳು ಲೋಕೋಪಯೋಗಿ ಇಲಾಖೆರವರೊಂದಿಗೆ ಚರ್ಚಿಸಿದಂತೆ, ಹಾಸನ, ಕೆ.ಆರ್.ಪೇಟೆ ಮತ್ತು ಚಾಮರಾಜ ನಗರದಲ್ಲಿನ ಸರ್ಕಾರಿ ತಾಂತ್ರಿಕ ಮಹಾವಿದ್ಯಾಲಯಗಳ ಕಟ್ಟಡ ಕಾಮಗಾರಿಗೆ ಸಂಬಂಧಿಸಿ ದಂತೆ ಕ್ರಮವಾಗಿ 40.00ಕೋಟಿ, 30.00ಕೋಟಿ ಮತ್ತು 30.00ಕೋಟಿರೂಗಳ ಅಂದಾಜನ್ನು ತಯಾರಿಸಿ ಸರ್ಕಾರದ ಆಡಳಿತಾತ್ಮಕ ಅನುಮೋದನೆ ನೀಡುವಂತೆ ಕೋರಿರುತ್ತಾರೆ.

3. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ: 175 :ಯೋಯೋಕ 2007 ಬೆಂಗಳೂರು ದಿ.1.06.2007**

**[ಇಡಿ:86:ಸ್ವೀಮರ(ಯುನಿಕ್) 2007 ದಿ.1.6.2007]**

4. 2006–07ನೇ ಸಾಲಿಗೆ ಹಾಸನ, ಕೆ.ಆರ್.ಪೇಟೆ ಮತ್ತು ಚಾಮರಾಜನಗರದಲ್ಲಿನ ಸರ್ಕಾರಿ ತಾಂತ್ರಿಕ ಮಹಾವಿದ್ಯಾಲಯಗಳ ಕಟ್ಟಡ ಕಾಮಗಾರಿಗೆ ಸಂಬಂಧಿಸಿದಂತೆ 2007–08ನೇ ಸಾಲಿಗೆ ಲೆಕ್ಕಶೀರ್ಷಿಕೆ 4202–02–104–1–03–386ರಡಿ 1/3ನೇ ಭಾಗದಷ್ಟು ಅನುದಾನ ವನ್ನು ಒದಗಿಸಿರುವುದರಿಂದ ಕ್ರಮವಾಗಿ 40.00ಕೋಟಿರೂಗಳ [ನಲವತ್ತು ಕೋಟಿ ರೂಗಳು ಮಾತ್ರ], 30.00ಕೋಟಿರೂಗಳ [ರೂಪಾಯಿ ಮೂವತ್ತು ಕೋಟಿಗಳು ಮಾತ್ರ] ಮತ್ತು 30.00 ಕೋಟಿರೂಗಳ[ರೂಪಾಯಿಮೂವತ್ತುಕೋಟಿಗಳುಮಾತ್ರ] ಅಂದಾಜಿಗೆ ಆಡಳಿತಾತ್ಮಕ ಅನು ಮೋದನೆಯನ್ನು ನೀಡಲು ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಅನುಮತಿ ನೀಡಿದೆ.

5. 2007–08ನೇ ಸಾಲಿಗೆ ಲೆಕ್ಕಶೀರ್ಷಿಕೆ:4202–02–104–1–03–386[ಯೋಜನೆ] ಯಡಿಯಲ್ಲಿ 50.00ಕೋಟಿರೂಗಳನ್ನು ಒದಗಿಸಿದ್ದು, ಅದರ ಮಿತಿಯೊಳಗೇ ಸದರಿ ಕಾಲೇಜುಗಳ ಕಟ್ಟಡ ನಿರ್ಮಾಣ ಕಾಮಗಾರಿಯನ್ನು ಪ್ರಾರಂಭಿಸಲು ಅನುಮತಿ ನೀಡಲಾಗಿದೆ.

6. ಪ್ರತಿ ಮಾಹೆಯೂ ಎಂ.ಎಂ.ಆರ್ ವರದಿಯಲ್ಲಿ ಕಾಮಗಾರಿಯ ಭೌತಿಕ ಮತ್ತು ಆರ್ಥಿಕ ಪ್ರಗತಿ ವರದಿಯನ್ನು ತಪ್ಪದೇ ಸಲ್ಲಿಸತಕ್ಕದ್ದು. ಕಾಮಗಾರಿಯ ಗುಣಮಟ್ಟದ ಬಗ್ಗೆ ಇಲಾಖೆಯ ಜವಾಬ್ದಾರಿಯುತ ಅಧಿಕಾರಿಗಳು ಆಗಿಂದ್ದಾಗ್ಗೆ ಪರಿಶೀಲನೆ ನಡೆಸಲು ಆದೇಶಿಸಲಾಗಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಅ.ಟಿ ಸಂಖ್ಯೆ ಲೋಇ246 ಆಕೋ–3/2007 ದಿನಾಂಕ: 17–5–2007ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1064

**ಕೆ. ಶ್ರೀಕಂಠೇಶ್ವರ**
ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ
ಸರ್ಕಾರದ ಸಹ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ಯೋಜನೆ)

**ವಿಷಯ:** ರಾಜ್ಯದಲ್ಲಿ ಎಂಟನೇ ತರಗತಿಯನ್ನು ಹೊಂದಿರುವ ಎಲ್ಲಾ ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಮತ್ತು ಸರ್ಕಾರಿ ಮತ್ತು ಅನುದಾನಿತ ಪ್ರೌಢ ಶಾಲೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ಅಕ್ಷರ ದಾಸೋಹ ಕಾರ್ಯಕ್ರಮವನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:–** 1. ಸನ್ಮಾನ್ಯ ಉಪ ಮುಖ್ಯಮಂತ್ರಿಯವರು 2007–08ನೇ ಸಾಲಿಗೆ ವಿಧಾನ ಮಂಡಲದಲ್ಲಿ ಮಂಡಿಸಿದ ಆಯವ್ಯಯ ಭಾಷಣ

2. ಸಾರ್ವಜನಿಕ ಶಿಕ್ಷಣ ಆಯುಕ್ತರು ಇವರ ಪ್ರಸ್ತಾವನೆ ಸಂಖ್ಯೆ ಎಂ2.ಅದಾ.ಪ್ರೌಶಾ 35/2006–07/ ದಿನಾಂಕ:29.03.2007.

**ಪ್ರಸ್ತಾವನೆ:**

1. ಪ್ರಸ್ತುತ ರಾಜ್ಯದಲ್ಲಿನ ಸರ್ಕಾರಿ ಮತ್ತು ಅನುದಾನಿತ ಶಾಲೆಗಳಲ್ಲಿ ಒಂದರಿಂದ ಏಳನೆಯ ತರಗತಿಯವರೆಗೆ ವ್ಯಾಸಂಗ ಮಾಡುತ್ತಿರುವ ಎಲ್ಲಾ ವಿದ್ಯಾರ್ಥಿಗಳಿಗೆ ಮಧ್ಯಾಹ್ನ ಬಿಸಿ ಊಟ ನೀಡುವ "ಅಕ್ಷರ ದಾಸೋಹ" ಕಾರ್ಯಕ್ರಮವನ್ನು ಜಾರಿಗೊಳಿಸಲಾಗುತ್ತಿದೆ. ಮೇಲೆ 1 ರಲ್ಲಿ ನಮೂದಿಸಿರುವಂತೆ ದಿನಾಂಕ:16.03.2007 ರಂದು ವಿಧಾನ ಮಂಡಲದಲ್ಲಿ 2007–08ನೇ ಸಾಲಿನ ಆಯವ್ಯಯವನ್ನು ಮಂಡಿಸುವಾಗ ಸನ್ಮಾನ್ಯ ಉಪ ಮುಖ್ಯಮಂತ್ರಿಗಳು 2007–08ನೇ ಸಾಲಿನಿಂದ ಜಾರಿಗೆ ಬರುವಂತೆ 8 ರಿಂದ 10ನೆಯ ತರಗತಿಯವರೆಗೆ ವ್ಯಾಸಂಗ ಮಾಡುತ್ತಿರುವ 17.18ಲಕ್ಷ ವಿದ್ಯಾರ್ಥಿಗಳಿಗೆ "ಅಕ್ಷರ ದಾಸೋಹ ಕಾರ್ಯಕ್ರಮವನ್ನು ವಿಸ್ತರಿಸಲು ನಮ್ಮ ಸರ್ಕಾರವು ತೀರ್ಮಾನಿಸಿದೆ" ಎಂದು ಆಯವ್ಯಯ ಭಾಷಣದಲ್ಲಿ ಘೋಷಿಸಿರುತ್ತಾರೆ. ಸದರಿ ಘೋಷಣೆಯನ್ನು ಕಾರ್ಯಾನುಷ್ಠಾನಕ್ಕೆ ತರುವ ಸಲುವಾಗಿ ಸಾರ್ವಜನಿಕ ಶಿಕ್ಷಣ ಆಯುಕ್ತರು,

ಬೆಂಗಳೂರು ಇವರು ಮೇಲೆ 2 ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಪ್ರಸ್ತಾವನೆಯನ್ನು ಸಲ್ಲಿಸಿ ರುತ್ತಾರೆ. ಸದರಿ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಇಡಿ:27:ಎಂ.ಎಂ.ಎಸ್ 2007 ಬೆಂಗಳೂರು, ದಿನಾಂಕ: 19.05.2007**

**[ಇಡಿ: 77 :ಸ್ವೀಮರ(ಯುನಿಕ್) 2007, ದಿನಾಂಕ:19.05.2007]**

ರಾಜ್ಯದಲ್ಲಿ 8ನೆಯ ತರಗತಿಯನ್ನು ಹೊಂದಿರುವ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ ಮತ್ತು ಸರ್ಕಾರಿ ಹಾಗೂ ಖಾಸಗಿ ಅನುದಾನಿತ ಪ್ರೌಢಶಾಲೆಗಳಲ್ಲಿ 8 ರಿಂದ 10ನೇ ತರಗತಿಗಳಲ್ಲಿ ವ್ಯಾಸಂಗ ಮಾಡುತ್ತಿರುವ ಎಲ್ಲಾ ವಿದ್ಯಾರ್ಥಿಗಳಿಗೆ ಮಧ್ಯಾಹ್ನ ಬಿಸಿಯೂಟ ನೀಡುವ ಅಕ್ಷರ ದಾಸೋಹ ಕಾರ್ಯಕ್ರಮವನ್ನು ವಿಸ್ತರಿಸಲು ಮತ್ತು ಈ ಕಾರ್ಯಕ್ರಮವನ್ನು 1.6.2007ರಿಂದ ಜಾರಿಗೊಳಿಸಲು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಸರ್ಕಾರವು ಮಂಜೂರಾತಿ ನೀಡಿದೆ.

ಈ ಕಾರ್ಯಕ್ರಮದಡಿ 8 ರಿಂದ 10ನೇ ತರಗತಿಗಳಲ್ಲಿ ವ್ಯಾಸಂಗ ಮಾಡುತ್ತಿರುವ ಎಲ್ಲಾ ವಿದ್ಯಾರ್ಥಿಗಳಿಗೆ ಮಧ್ಯಾಹ್ನ ಉಪಾಹಾರ ನೀಡಲು ಪ್ರತಿವಿದ್ಯಾರ್ಥಿಗೆ ಪ್ರತಿ ದಿನಕ್ಕೆ

| | | ಗರಿಷ್ಠ ಸರಾಸರಿ ಬೆಲೆ [ರೂಗಳಲ್ಲಿ] |
|---|---|---|
| ಅಕ್ಕಿ | 150ಗ್ರಾಂ | 1.36 |
| ಬೇಳೆ | 25ಗ್ರಾಂ | 0.75 |
| ಎಣ್ಣೆ | 6ಗ್ರಾಂ | 0.24 |
| ಉಪ್ಪು | **4ಗ್ರಾಂ** | 0.03 |
| ಸಾಗಾಣಿಕೆ ವೆಚ್ಚ | – | 0.01 |
| ತರಕಾರಿ ಸಾಂಬಾರು ಪದಾರ್ಥಗಳು | 70 ಗ್ರಾಂ | 0.70 |
| ಎಲ್.ಪಿ.ಜಿ.ಗ್ಯಾಸ್ | – | 0.40 |
| **ಒಟ್ಟು** | | **3.49** |

ಮೇಲೆ ಸೂಚಿಸಿರುವಂತೆ ಗರಿಷ್ಠ ಸರಾಸರಿ ವೆಚ್ಚವನ್ನು ಭರಿಸಲು ಅನುಮತಿ ನೀಡಿದೆ.

ಸರ್ಕಾರಿ ಪ್ರೌಢಶಾಲೆಗಳಿಗೆ ಸಂಬಂಧಿಸಿದಂತೆ ಸರ್ಕಾರಿ ಪ್ರೌಢಶಾಲೆಗಳಲ್ಲಿ 300ಕ್ಕಿಂತ ಕಡಿಮೆ ವಿದ್ಯಾರ್ಥಿಗಳನ್ನು ಹೊಂದಿರುವ ಶಾಲೆಗಳಲ್ಲಿ ಪ್ರತ್ಯೇಕ ಅಡುಗೆ ಕೇಂದ್ರವನ್ನು ಪ್ರಾರಂಭಿಸುವ ಬದಲಿಗೆ ಅವುಗಳನ್ನು ಈಗ ಕಾರ್ಯಕ್ರಮ ಜಾರಿಗೊಳಿಸುತ್ತಿರುವ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಗಳಿಗೆ ಸಂಯೋಜಿಸಿ ಒಬ್ಬರು ಹೆಚ್ಚುವರಿ ಅಡುಗೆ ಸಿಬ್ಬಂದಿಯನ್ನು ನೇಮಿಸಿ ಬಿಸಿಯೂಟವನ್ನು ತಯಾರಿಸಿ ಅವನ್ನು ಸರ್ಕಾರಿ ಪ್ರೌಢಶಾಲೆಗೆ ಸಾಗಿಸುವ ವ್ಯವಸ್ಥೆ ಮಾಡತಕ್ಕದ್ದು. ಇಂತಹ ಶಾಲೆಗಳಲ್ಲಿ ಸ್ಥಳೀಯ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯಿಂದ ಊಟ ನೀಡಬೇಕಾದ ಪ್ರೌಢಶಾಲೆಗಳಿಗೆ ಬಿಸಿಯೂಟವನ್ನು ಸಾಗಿಸುವ ಏರ್ಪಾಟನ್ನು ಮಾಡಲೂ ಸೂಚಿಸಿದೆ. ಇಂತಹ ಶಾಲೆಗಳಿಗೆ ಬಿಸಿಯೂಟ ಸಾಗಿಸಲು ಬೇಕಾಗುವ ಪಾತ್ರೆಗಳ ವೆಚ್ಚಕ್ಕಾಗಿ ಗರಿಷ್ಠ ಒಂದು ಶಾಲೆಗೆ ರೂ.3500.00[ರೂಪಾಯಿಮೂರುಸಾವಿರದಐದುನೂರು ಮಾತ್ರ] ಗಳವರೆಗೆ ಸಂಬಂಧಿಸಿದ ಶಾಲಾಭಿವೃದ್ಧಿ ಮೇಲುಸ್ತುವಾರಿ ಸಮಿತಿಗಳ ಮೂಲಕ ವೆಚ್ಚವನ್ನು ಭರಿಸಲು ಹಾಗೂ ಸಾಗಾಣಿಕೆ ವೆಚ್ಚಕ್ಕಾಗಿ ಗರಿಷ್ಠ ಒಂದು ಶಾಲೆಗೆ ಒಂದು ತಿಂಗಳಿಗೆ 500.00ರೂಗಳಂತೆ[ರೂಐದುನೂರುಮಾತ್ರ] ಸಂಬಂಧಿಸಿದ ಶಾಲಾ ಅಭಿವೃದ್ಧಿ ಮೇಲುಸ್ತುವಾರಿ ಸಮಿತಿ ಮೂಲಕ ವೆಚ್ಚ ಭರಿಸಲು ಅನುಮೋದನೆ ನೀಡಿದೆ. ಇಂತಹ ಶಾಲೆಗಳಲ್ಲಿ 1 ರಿಂದ 10 ತರಗತಿವರೆಗಿನ ಯೋಜನೆಯ ನಿರ್ವಹಣೆಯನ್ನು ಸಂಬಂಧಿಸಿದ ಪ್ರೌಢ ಶಾಲಾ ಶಾಲಾಭಿವೃದ್ಧಿ ಸಮಿತಿ/ಶಾಲಾಭಿವೃದ್ಧಿ ಮೇಲುಸ್ತುವಾರಿ ಸಮಿತಿಗೆ ಹಸ್ತಾಂತರಿಸುವುದು.

300ಕ್ಕಿಂತ ಹೆಚ್ಚು ವಿದ್ಯಾರ್ಥಿಗಳಿರುವ ಸರ್ಕಾರಿ ಪ್ರೌಢಶಾಲೆಗಳಿಗೆ ಪ್ರತ್ಯೇಕವಾಗಿ ಅಡಿಗೆ ಕೇಂದ್ರವನ್ನು ಪ್ರಾರಂಭಿಸಲು ಈ ಕೆಳಕಂಡಂತೆ ಖರ್ಚಿನ ವಿವರ ನಮೂದಿಸಿ ಅನುಮೋದನೆ ನೀಡಿದೆ.

| ವಿದ್ಯಾರ್ಥಿಗಳ ಸಂಖ್ಯೆ | ಆಡುಗೆ ಪಾತ್ರೆಗಳ ಖರೀದಿಗಾಗಿ [ಪ್ರತಿ ಕೇಂದ್ರಕ್ಕೆ] (ರೂಗಳಲ್ಲಿ) | ಪ್ರತಿ ಕೇಂದ್ರಕ್ಕೆ ಬೇಕಾಗುವ ಅಡುಗೆ ಸಿಬ್ಬಂದಿ ಸಂಖ್ಯೆ ಮತ್ತು ಸಂಭಾವನೆಗಾಗಿ |
|---|---|---|
| 301–500 | ರೂ.7500/–ದಂತೆ | 4 ಅಡುಗೆ ಸಿಬ್ಬಂದಿ [ಮಾಸಿಕ ರೂ.2000] |
| 501–100 | ರೂ.8500/– ದಂತೆ | 5 ಅಡುಗೆ ಸಿಬ್ಬಂದಿ [ಮಾಸಿಕ ರೂ.2450/–] |
| 1001 ಕ್ಕಿಂತ ಹೆಚ್ಚು | ರೂ. 10,000/– ದಂತೆ | 6 ಅಡುಗೆ ಸಿಬ್ಬಂದಿ [ಮಾಸಿಕ ರೂ.2900/–] |

ಮೇಲ್ಕಾಣಿಸಿದ ಅಡುಗೆ ಪಾತ್ರೆಗಳನ್ನು ಸಂಬಂಧಿಸಿದ ಶಾಲೆಗಳ ಶಾಲಾ ಅಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿಗಳಿಗೆ ಹಣ ಬಿಡುಗಡೆ ಮಾಡಿ ಅವರ ಮೂಲಕ ನಿಯಮಾನುಸಾರ ಖರೀದಿಸಲು ಅನುಮೋದನೆ ನೀಡಿದೆ.

ಖಾಸಗಿ ಅನುದಾನಿತ ಪ್ರೌಢಶಾಲೆಗಳಿಗೆ ಸಂಬಂಧಿಸಿದಂತೆ ಪ್ರಸ್ತುತ ಖಾಸಗಿ ಅನುದಾನಿತ ಪ್ರಾಥಮಿಕ ಶಾಲೆಗಳಿಗೆ ಅನುಸರಿಸುತ್ತಿರುವ ಕ್ರಮವನ್ನೇ ಮುಂದುವರಿಸಲು ಅನುಮೋದನೆ ನೀಡಿದೆ. ಅವುಗಳಿಗೆ ಅಕ್ಕಿ/ಗೋದಿ, ಹಾಗೂ ಪರಿವರ್ತನಾ ವೆಚ್ಚವನ್ನು ಮಾತ್ರ ಒದಗಿಸ ಲಾಗುವುದು. ಉಳಿದಂತೆ ಅಡುಗೆ ಸಿಬ್ಬಂದಿ ಮತ್ತು ಅಡುಗೆ ಪಾತ್ರೆಗಳನ್ನು ಸಂಬಂಧಿಸಿದ ಶಾಲಾ ಆಡಳಿತ ಮಂಡಳಿಗಳವರು ಒದಗಿಸತಕ್ಕದ್ದು.

ಅಕ್ಕಿ/ಗೋದಿ, ಬೇಳೆ, ಉಪ್ಪು ಹಾಗೂ ಎಣ್ಣೆಯನ್ನು ಈಗ ಪಡೆಯುತ್ತಿರುವಂತೆ ಕರ್ನಾಟಕ ರಾಜ್ಯ ಆಹಾರ ಮತ್ತು ನಾಗರೀಕ ಸರಬರಾಜು ನಿಗಮದ ಮೂಲಕ ಪಡೆಯುವ ವಿಧಾನವನ್ನು ಮುಂದುವರೆಸಲು ಸೂಚಿಸಲಾಗಿದೆ.

ಸರ್ಕಾರಿ ಪ್ರೌಢಶಾಲೆಗಳಿಗೆ ಪರಿವರ್ತನಾ ವೆಚ್ಚವನ್ನು ಸಂಬಂಧಿಸಿದ ಶಾಲೆಯ ಶಾಲಾಭಿವೃದ್ಧಿ ಮತ್ತು ಮೇಲ್ವಿಚಾರಣಾ ಸಮಿತಿಗಳಿಗೆ ನೀಡಿ ಶಾಲಾ ಮುಖ್ಯೋಪಾಧ್ಯಾಯರ ಪರಿವೀಕ್ಷಣೆಯಲ್ಲಿ ಶಾಲಾ ಮಟ್ಟದಲ್ಲಿ ಬಿಸಿ ಊಟ ತಯಾರಿಕೆಯ ಜವಾಬ್ದಾರಿಯನ್ನು ನೀಡಲು ಸೂಚಿಸಿದೆ.

ಖರೀದಿಗಳಿಗೆ ಸಂಬಂಧಿಸಿದಂತೆ ಎಲ್ಲಾ ಪ್ರಚಲಿತ ಖರೀದಿ ನಿಯಮಗಳನ್ನು ಹಾಗೂ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧ್ಯಾದೇಶ–2000 ಮತ್ತು ಅದರಡಿಯಲ್ಲಿನ ಜಾರಿಯಲ್ಲಿರುವ ಎಲ್ಲಾ ನಿಯಮಗಳನ್ನೂ ಚಾಚೂ ತಪ್ಪದೇ ಕಡ್ಡಾಯವಾಗಿ ಹಾಗೂ ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

ಹಾಲಿ ಜಾರಿಗೊಳ್ಳುತ್ತಿರುವ ಅಕ್ಷರ ದಾಸೋಹ ಕಾರ್ಯಕ್ರಮದ ಮಾದರಿಯಲ್ಲಿಯೇ ಈ ವಿಸ್ತರಣೆ ಕಾರ್ಯಕ್ರಮವನ್ನು ಸಮರ್ಪಕವಾಗಿ ಹಾಗೂ ಸಕಾಲಿಕವಾಗಿ ಜಾರಿಗೊಳಿಸಲು ವಿವರ ವಾದ ಸುತ್ತೋಲೆಯನ್ನು ಹೊರಡಿಸಲು ಸಾರ್ವಜನಿಕ ಶಿಕ್ಷಣ ಆಯುಕ್ತರು, ಬೆಂಗಳೂರು ಇವರಿಗೆ ಅನುಮತಿ ನೀಡಿದೆ.

ಈ ಕಾರ್ಯಕ್ರಮವನ್ನು ಜಾರಿಗೊಳಿಸಲು ಅಗತ್ಯವಿರುವ ಅನುದಾನವನ್ನು ಜಿಲ್ಲಾ ವಲಯ ಲೆಕ್ಕ ಶೀರ್ಷಿಕೆ: 2202–01–800–1–35 [ಯೋಜನೆ] ಅಡಿಯಲ್ಲಿ ನಿಗಧಿಯಾಗಿರುವ ಅನುದಾನ ದಲ್ಲಿಯೇ ಭರಿಸಲು ಅನುಮತಿ ನೀಡಿದೆ.

ಎಲ್ಲೆಲ್ಲಿ ಸ್ತ್ರೀ ಶಕ್ತಿ ಗುಂಪುಗಳು ಮುಂದೆ ಬರುತ್ತವೆಯೋ ಅಲ್ಲಿ ಸ್ತ್ರೀ ಶಕ್ತಿ ಗುಂಪುಗಳಿಗೆ ಅಡುಗೆ ತಯಾರಿಸುವ ಮತ್ತು ವಿತರಿಸುವ ಜವಾಬ್ದಾರಿಯನ್ನು ನೀಡಲು ಕ್ರಮ ವಹಿಸತಕ್ಕದ್ದು.

ಈ ಆದೇಶವನ್ನು ಯೋಜನೆ ಮತ್ತು ಆರ್ಥಿಕ ಇಲಾಖೆಗಳು ಕ್ರಮವಾಗಿ ತಮ್ಮ ಅ.ಟಿ.ಸಂಖ್ಯೆ ಯೋ.ಇ:44:ಜಶ 2007 ದಿನಾಂಕ:24.4.2007 ಮತ್ತು ಆ.ಇ 435 ವೆಚ್ಚ –8/2007 ದಿನಾಂಕ 26.4.2007ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ
ಹೆಸರಿನಲ್ಲಿ,

ಪಿ.ಆರ್. 1058

**ಕೆ. ಶ್ರೀಕಂಠೇಶ್ವರ**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ಯೋಜನೆ)

**ವಿಷಯ:** ಅಪೆಂಡಿಕ್ಸ್–ಇ ನಲ್ಲಿನ ಪದವೀ ಪೂರ್ವ ಕಾಲೇಜು ಕಟ್ಟಡಗಳ ಕಾಮಗಾರಿಗಳಿಗೆ ಆಡಳಿತಾತ್ಮಕ ಮಂಜೂರಾತಿ ನೀಡುವ ಕುರಿತು.

**ಓದಲಾಗಿದೆ:–**

1. ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರುರವರ ಪತ್ರ ಸಂಖ್ಯೆ: ಪಪೂಶಿಇ/ಕಟ್ಟಡ/ ಸಪಪೂಕಾ/ಕ.ಕ/ಆ.ಅನು–12/2006–07/ದಿ: 3.2.2007
2. ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರುರವರ ಪತ್ರ ಸಂಖ್ಯೆ: ಪಪೂಶಿಇ/ಕಟ್ಟಡ/ ಸಪಪೂಕಾ/ಕ.ಕ/ಆ.ಅನು–7/2006–07/ದಿ: 3.2.2007
3. ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರುರವರ ಪತ್ರ ಸಂಖ್ಯೆ: ಪಪೂಶಿಇ/ಕಟ್ಟಡ/ ಸಪಪೂಕಾ/ಕ.ಕ/ಆ.ಅನು–1/2006–07/ದಿ: 25.1.2007
4. ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರುರವರ ಪತ್ರ ಸಂಖ್ಯೆ: ಪಪೂಶಿಇ/ಕಟ್ಟಡ/ ಸಪಪೂಕಾ/ಕ.ಕ/ಆ.ಅನು–12/2006–07/ದಿ: 3.2.2007

**ಪ್ರಸ್ತಾವನೆ:**

ಮೇಲೆ (1) ರಿಂದ (4)ರವರೆಗೆ ಓದಲಾದ ಆಯುಕ್ತರು, ಪದವೀ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪತ್ರಗಳಲ್ಲಿ ಸರ್ಕಾರಿ ಪದವೀ ಪೂರ್ವ ಕಾಲೇಜುಗಳಲ್ಲಿ ಅಪೆಂಡಿಕ್ಸ್–ಇ ನಡಿ ಈ ಕೆಳಕಂಡಂತೆ ಒದಗಿಸಲಾದ ಮೊತ್ತಕ್ಕೆ ಆಡಳಿತಾತ್ಮಕ ಅನುಮೋದನೆ ನೀಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

(ರೂ.ಲಕ್ಷಗಳಲ್ಲಿ)

| ಕ್ರಮ ಸಂಖ್ಯೆ | ಹೆಸರು | ಅಂದಾಜು ವೆಚ್ಚ | ಮಂಜೂರಾದ ಅನುದಾನ |
|---|---|---|---|
| 01. | ಸ.ಪ.ಪೂ.ಕಾಲೇಜು, ಮಂಡ್ಯ | 50.00 | 15.00 |
| 02. | ಸ.ಪ.ಪೂ.ಕಾಲೇಜು, ಕೊರಟಗೆರೆ | 40.00 | 12.00 |
| 03. | ಸ.ಪ.ಪೂ.ಕಾಲೇಜು, ಅಮೃತೂರು ಕುಣಿಗಲ್ ತಾಲ್ಲೂಕು | 25.00 | 7.50 |
| 04. | ಸ.ಪ.ಪೂ.ಕಾಲೇಜು, ಭಕ್ತರಹಳ್ಳಿ, ಕುಣಿಗಲ್ ತಾಲ್ಲೂಕು | 30.00 | 9.00 |
| 05. | ಸ.ಪ.ಪೂ.ಕಾಲೇಜು, ತೀರ್ಥಹಳ್ಳಿ | 50.00 | 15.00 |
| 06. | ಸ.ಪ.ಪೂ.ಕಾಲೇಜು, ಹಳೇನಗರ ಭದ್ರಾವತಿ | 30.00 | 9.00 |
| 07. | ಸ.ಪ.ಪೂ.ಕಾಲೇಜು, ನಾಪೊಕ್ಲು | 30.00 | 9.00 |
| 08. | ಸ.ಪ.ಪೂ.ಕಾಲೇಜು, ರಥಬೀದಿ, ಮಂಗಳೂರು | 30.00 | 9.00 |
| 09. | ಸ.ಪ.ಪೂ.ಕಾಲೇಜು, ಮಿಜಾರು, ಮೂಡಬಿದ್ರೆ ತಾಲ್ಲೂಕು | 30.00 | 9.00 |
| 10. | ಸ.ಪ.ಪೂ.ಕಾಲೇಜು, ಸೂರತ್ಕಲ್, ಮಂಗಳೂರು ತಾಲ್ಲೂಕು | 30.00 | 9.00 |
| 11. | ಸ.ಪ.ಪೂ.ಕಾಲೇಜು, ಕೊಕ್ಕಡ, ಬೆಳ್ತಂಗಡಿ ತಾಲ್ಲೂಕು | 30.00 | 9.00 |
| 12. | ಸ.ಪ.ಪೂ.ಕಾಲೇಜು, (ಬಾಲಕಿಯರ), ಹಾಸನ | 30.00 | 09.00 |
| 13. | ಸ.ಪ.ಪೂ.ಕಾಲೇಜು, (ಬಾಲಕಿಯರ), ವಿಭಜಿತಹಾಸನ | 35.00 | 10.50 |
| 14. | ಸ.ಪ.ಪೂ.ಕಾಲೇಜು, ಸಂತೇಪೇಟೆ, ಹಾಸನ | 45.00 | 13.50 |
| 15. | ಸ.ಪ.ಪೂ.ಕಾಲೇಜು, ಮಂಚೇಗೌಡನಕೊಪ್ಪಲು, ಮೈಸೂರು | 75.00 | 22.00 |
| 16. | ಸ.ಪ.ಪೂ.ಕಾಲೇಜು, ಗೋಳಿಯಂಗಡಿ ಕುಂದಾಪುರ ತಾಲ್ಲೂಕು | 40.00 | 12.00 |
| 17. | ಸ.ಪ.ಪೂ.ಕಾಲೇಜು, ಬಿದ್ಕಲ್ ಕಟ್ಟೆ, ಕುಂದಾಪುರ ತಾಲ್ಲೂಕು | 40.00 | 12.00 |
| 18. | ಸ.ಪ.ಪೂ.ಕಾಲೇಜು, ಎರ್ಮಾಳು ಬಡಾ ಉಡುಪಿ | 30.00 | 09.00 |
| 19. | ಸ.ಪ.ಪೂ.ಕಾಲೇಜು, ಮುಳಬಾಗಿಲು ಕೋಲಾರ ತಾಲ್ಲೂಕು | 40.00 | 12.00 |
| 20. | ಸ.ಪ.ಪೂ.ಕಾಲೇಜು, (ಬಾಲಕಿಯರ) ಗಂಗಾವತಿ | 10.00 | 03.00 |
| 21. | ಸ.ಪ.ಪೂ.ಕಾಲೇಜು, (ಬಾಲಕರ) ಗಂಗಾವತಿ | 10.00 | 03.00 |

ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 59 ಯೋಸಕಾ 2007 ಬೆಂಗಳೂರು ದಿ: 08.02.2007**
**ಇಡಿ 7 ಸ್ಕೀಮರ (ಯುನಿಕ್) 2007 ದಿ: 08.02.2007)**

2006–07ನೇ ಅಪೆಂಡಿಕ್ಸ್–ಇ ನಡಿ ಅನುಬಂಧದಲ್ಲಿ ತೋರಿಸಿರುವ ಸರ್ಕಾರಿ ಪದವೀ ಪೂರ್ವ ಕಾಲೇಜುಗಳಿಗೆ ಒದಗಿಸಲಾದ ಅನುದಾನಕ್ಕೆ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆಯನ್ನು ನೀಡಲು ಆಯುಕ್ತರು, ಪದವೀ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಸರ್ಕಾರವು ಅನುಮತಿ ನೀಡಿದೆ.

2006–07ನೇ ಸಾಲಿಗೆ ಅಪೆಂಡಿಕ್ಸ್–ಇ ಯೋಜನೆಯಡಿಯಲ್ಲಿ ಸದರಿ ಕಾಲೇಜುಗಳ ಕಟ್ಟಡ ನಿರ್ಮಾಣಕ್ಕೆ ಒದಗಿಸಿಕೊಂಡಿರುವ ಮೊತ್ತಕ್ಕೆ ಸೀಮಿತಗೊಳಿಸಿ ಕಾಮಗಾರಿಯನ್ನು ಪ್ರಾರಂಭಿಸಲು ಅನುಮತಿ ನೀಡಲಾಗಿದೆ.

ಪ್ರತಿ ಮಾಹೆಯೂ ಎಂ.ಎಂ.ಆರ್. ವರದಿಯಲ್ಲಿ ಕಾಮಗಾರಿಯ ಭೌತಿಕ ಮತ್ತು ಆರ್ಥಿಕ ಪ್ರಗತಿ ವರದಿಯನ್ನು ತಪ್ಪದೇ ಸಲ್ಲಿಸತಕ್ಕದ್ದು. ಕಾಮಗಾರಿಯ ಗುಣಮಟ್ಟದ ಬಗ್ಗೆ ಇಲಾಖೆಯ ಜವಾಬ್ದಾರಿಯುತ ಅಧಿಕಾರಿಗಳು ಆಗಿಂದ್ದಾಗ್ಗೆ ಪರಿಶೀಲನೆ ನಡೆಸಲು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು
ಅವರ ಹೆಸರಿನಲ್ಲಿ,
**ಕೆ. ಶ್ರೀಕಂಠೇಶ್ವರ**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಸಹ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ಯೋಜನೆ)

**ಸರ್ಕಾರಿ ಆದೇಶ ಸಂಖ್ಯೆ: ಇಡಿ 59 ಯೋಸಕಾ 2007 ಬೆಂಗಳೂರು ದಿ: 09.02.2007**
**ಇಡಿ 8 ಸ್ಕೀಮರ (ಯುನಿಕ್) 2007 ದಿ: 09.02.2007)ಕ್ಕೆ ಅನುಬಂಧ**

(ರೂ.ಲಕ್ಷಗಳಲ್ಲಿ)

| ಕ್ರಮ ಸಂಖ್ಯೆ | ಹೆಸರು | ಅಂದಾಜು ವೆಚ್ಚ | ಮಂಜೂರಾದ ಅನುದಾನ |
|---|---|---|---|
| | **ಮಂಡ್ಯ ಜಿಲ್ಲೆ** | | |
| 01. | ಸ.ಪ.ಪೂ.ಕಾಲೇಜು, ಮಂಡ್ಯ | 50.00 | 15.00 |
| | **ತುಮಕೂರು ಜಿಲ್ಲೆ** | | |
| 01. | ಸ.ಪ.ಪೂ.ಕಾಲೇಜು, ಕೊರಟಗೆರೆ | 40.00 | 12.00 |

| | | | |
|---|---|---|---|
| 02. | ಸ.ಪ.ಪೂ.ಕಾಲೇಜು, ಅಮೃತೂರು ಕುಣಿಗಲ್ ತಾಲ್ಲೂಕು | 25.00 | 7.50 |
| 03. | ಸ.ಪ.ಪೂ.ಕಾಲೇಜು, ಭಕ್ತರಹಳ್ಳಿ, ಕುಣಿಗಲ್ ತಾಲ್ಲೂಕು | 30.00 | 9.00 |
| **ಶಿವಮೊಗ್ಗ ಜಿಲ್ಲೆ** | | | |
| 01. | ಸ.ಪ.ಪೂ.ಕಾಲೇಜು, ತೀರ್ಥಹಳ್ಳಿ | 50.00 | 15.00 |
| 02. | ಸ.ಪ.ಪೂ.ಕಾಲೇಜು, ಹಳೇನಗರ ಭದ್ರಾವತಿ | 30.00 | 9.00 |
| **ಕೊಡಗು ಜಿಲ್ಲೆ** | | | |
| 01 | ಸ.ಪ.ಪೂ.ಕಾಲೇಜು, ನಾಪೊಕ್ಲು | 30.00 | 9.00 |
| **ದಕ್ಷಿಣ ಕನ್ನಡ ಜಿಲ್ಲೆ** | | | |
| 01 | ಸ.ಪ.ಪೂ.ಕಾಲೇಜು, ರಥಬೀದಿ, ಮಂಗಳೂರು | 30.00 | 9.00 |
| 02 | ಸ.ಪ.ಪೂ.ಕಾಲೇಜು, ಮಿಜಾರು, ಮೂಡಬಿದ್ರೆ ತಾಲ್ಲೂಕು | 30.00 | 9.00 |
| 03 | ಸ.ಪ.ಪೂ.ಕಾಲೇಜು, ಸೂರತ್ಕಲ್, ಮಂಗಳೂರು ತಾಲ್ಲೂಕು | 30.00 | 9.00 |
| 04 | ಸ.ಪ.ಪೂ.ಕಾಲೇಜು, ಕೊಕ್ಕಡ, ಬೆಳ್ತಂಗಡಿ ತಾಲ್ಲೂಕು | 30.00 | 9.00 |
| **ಹಾಸನ ಜಿಲ್ಲೆ** | | | |
| 01 | ಸ.ಪ.ಪೂ.ಕಾಲೇಜು, (ಬಾಲಕಿಯರ), ಹಾಸನ | 30.00 | 09.00 |
| 02 | ಸ.ಪ.ಪೂ.ಕಾಲೇಜು, (ಬಾಲಕಿಯರ), ವಿಭಜಿತಹಾಸನ | 35.00 | 10.50 |
| 03 | ಸ.ಪ.ಪೂ.ಕಾಲೇಜು, ಸಂತೇಪೇಟೆ, ಹಾಸನ | 45.00 | 13.50 |
| **ಮೈಸೂರು ಜಿಲ್ಲೆ** | | | |
| 01 | ಸ.ಪ.ಪೂ.ಕಾಲೇಜು, ಮಂಚೇಗೌಡನಕೊಪ್ಪಲು, ಮೈಸೂರು | 75.00 | 22.00 |
| **ಉಡುಪಿ ಜಿಲ್ಲೆ** | | | |
| 01 | ಸ.ಪ.ಪೂ.ಕಾಲೇಜು, ಗೋಳಿಯಂಗಡಿ ಕುಂದಾಪುರ ತಾಲ್ಲೂಕು | 40.00 | 12.00 |
| 02 | ಸ.ಪ.ಪೂ.ಕಾಲೇಜು, ಬಿದ್ಕಲ್ ಕಟ್ಟೆ, ಕುಂದಾಪುರ ತಾಲ್ಲೂಕು | 40.00 | 12.00 |
| 03 | ಸ.ಪ.ಪೂ.ಕಾಲೇಜು, ಎರ್ಮಾಳು ಬಡಾ ಉಡುಪಿ | 30.00 | 09.00 |
| **ಕೋಲಾರ ಜಿಲ್ಲೆ** | | | |
| 01 | ಸ.ಪ.ಪೂ.ಕಾಲೇಜು, ಮುಳಬಾಗಿಲು ಕೋಲಾರ ತಾಲ್ಲೂಕು | 40.00 | 12.00 |
| **ಕೊಪ್ಪಳ ಜಿಲ್ಲೆ** | | | |
| 01 | ಸ.ಪ.ಪೂ.ಕಾಲೇಜು, (ಬಾಲಕಿಯರ) ಗಂಗಾವತಿ | 10.00 | 03.00 |
| 02 | ಸ.ಪ.ಪೂ.ಕಾಲೇಜು, (ಬಾಲಕರ) ಗಂಗಾವತಿ | 10.00 | 03.00 |

**ಕೆ. ಶ್ರೀಕಂಠೇಶ್ವರ**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಸಹ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ಯೋಜನೆ)

ಪಿ.ಆರ್. 500

**ಕಂದಾಯ ಸಚಿವಾಲಯ**

**ವಿಷಯ:** ಮೈಸೂರು ಜಿಲ್ಲೆ ಟಿ. ನರಸೀಪುರ ತಾಲ್ಲೂಕು ಡಣನಾಯಕನಪುರ ಗ್ರಾಮದ ಭೂಸ್ವಾಧೀನ ಪ್ರಕರಣ ಅಸಿಂಧುವಾಗಲು ಕಾರಣರಾದವರ ಮೇಲಿನ ಶಿಸ್ತು ಕ್ರಮ ಕುರಿತು – ಆದೇಶ.

**ಓದಲಾಗಿದೆ:–**
1. ಸರ್ಕಾರಿ ಆದೇಶ ಸಂಖ್ಯೆ: ನೀಇ/25/ಸೇಇವಿ/99, ದಿನಾಂಕ: 09.06.2000
2. ಸರ್ಕಾರಿ ಆದೇಶ ಸಂಖ್ಯೆ: ನೀಇ/25/ಸೇಇವಿ/99, ದಿನಾಂಕ: 21.11.2002
3. ಸರ್ಕಾರಿ ಆದೇಶ ಸಂಖ್ಯೆ: ಕಂಇ 105 ಭೂದಾಸೇ (3) 2003, ದಿ: 13.02.2007ರ ಪತ್ರ
4. ಕರ್ನಾಟಕ ಲೋಕ ಸೇವಾ ಆಯೋಗದ ಕಾರ್ಯದರ್ಶಿಯವರ ಪತ್ರ ಸಂಖ್ಯೆ PSC 208 ಸಿ.ಎನ್.ಎಸ್. 06, ದಿ: 15.03.2007.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ: 09.06.2000ರ ಆದೇಶದಲ್ಲಿ ಮೈಸೂರು ಜಿಲ್ಲೆ, ಟಿ. ನರಸೀಪುರ ತಾಲ್ಲೂಕು ಡಣನಾಯಕನಪುರ ಗ್ರಾಮದ ಭೂಸ್ವಾಧೀನ ಪ್ರಕರಣ ಅಸಿಂಧುವಾಗಲು ಕಾರಣರಾದವರ ಬಗ್ಗೆ ವಿಚಾರಣೆ ನಡೆಸಲು ಶ್ರೀ ಕೃಷ್ಣನಾಯ್ಕ ಕೆ. ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಮೈಸೂರು ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಿಸಲಾಗಿತ್ತು.

ವಿಚಾರಣಾಧಿಕಾರಿಯವರು ಸದರಿ ಪ್ರಕರಣದಲ್ಲಿ ವಿಚಾರಣೆ ನಡೆಸಿ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಸದರಿ ವಿಚಾರಣಾ ವರದಿಯಲ್ಲಿ ಶ್ರೀ ಎನ್.ಸಿ. ಆನಂದ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ನಿವೃತ್ತ)ರವರ ವಿರುದ್ಧ ಮಾಡಲಾಗಿದ್ದ ಆಪಾದನೆಗಳು ಸಾಬೀತಾಗಿಲ್ಲವೆಂದು ಹಾಗೂ ಎರಡನೆಯ ಆಪಾದಿತರಾದ ಶ್ರೀ ಜಿ.ಎನ್. ಲಿಂಗಯ್ಯ, ಪ್ರಥಮ ದರ್ಜೆ ಭೂಮಾಪಕರು ಇವರ ವಿರುದ್ಧ ಮಾಡಲಾಗಿದ್ದ ಆಪಾದನೆಗಳು ಸಾಭೀತಾಗಿದೆ ಎಂದು ವರದಿ ಸಲ್ಲಿಸಿರುತ್ತಾರೆ. ವಿಚಾರಣಾಧಿಕಾರಿಯವರ ವಿಚಾರಣಾ ವರದಿಯನ್ನು ಜಲಸಂಪನ್ಮೂಲ ಇಲಾಖೆಯು ಪರಿಶೀಲಿಸಿ, ಶ್ರೀ ಎನ್.ಸಿ. ಆನಂದ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ನಿವೃತ್ತ) ಇವರ ಮೇಲೆ ಮಾಡಲಾಗಿದ್ದ ಆರೋಪಗಳು ವಿಚಾರಣೆಯಲ್ಲಿ ಸಾಭೀತಾಗದೇ ಇರುವುದರಿಂದ ಅವರನ್ನು ಆಪಾದನೆಗಳಿಂದ ದೋಷಮುಕ್ತರನ್ನಾಗಿ ಮಾಡಿ ಜಲಸಂಪನ್ಮೂಲ ಇಲಾಖೆಯು ಮೇಲೆ (2)ರಲ್ಲಿ ಓದಲಾದ ದಿನಾಂಕ: 21.11.2002ರಂದು ಆದೇಶ ಹೊರಡಿಸಿರುತ್ತಾರೆ. ಶ್ರೀ ಜಿ.ಎನ್. ಲಿಂಗಯ್ಯ, ಪ್ರಥಮ ದರ್ಜೆ ಭೂಮಾಪಕರು ಇವರ ವಿರುದ್ಧ ಮಾಡಲಾಗಿರುವ ಆಪಾದನೆಗಳು ಸಾಭೀತಾಗಿರುವುದರಿಂದ ಹಾಗೂ ಈ ನೌಕರರು ಕಂದಾಯ ಇಲಾಖೆಯ ನೌಕರರಾಗಿರುವುದರಿಂದ ಇವರಿಗೆ ದಂಡನೆಯನ್ನು ವಿಧಿಸಲು ಕಂದಾಯ ಇಲಾಖೆಗೆ ಕಡತವನ್ನು ಕಳುಹಿಸಿ ಕೊಟ್ಟಿರುತ್ತಾರೆ.

ಶ್ರೀ ಜಿ.ಎನ್. ಲಿಂಗಯ್ಯ, ಪ್ರಥಮ ದರ್ಜೆ ಭೂಮಾಪಕರು ಇವರ ವಿರುದ್ಧದ ಆರೋಪಗಳು ಸಾಭೀತಾಗಿರುವ ಹಿನ್ನೆಲೆಯಲ್ಲಿ ನಿವೃತ್ತರಾಗಿರುವ ಈ ನೌಕರರ ನಿವೃತ್ತಿ ವೇತನದಲ್ಲಿ ಶೇಕಡ 5ರಷ್ಟು ಮೊತ್ತವನ್ನು ಮೂರು ವರ್ಷದ ಅವಧಿಗೆ ಕಡಿತಗೊಳಿಸಬಹುದೆಂದು ಪ್ರಸ್ತಾಪಿಸಿ ಇದಕ್ಕೆ ಮಾನ್ಯ ಜಲಸಂಪನ್ಮೂಲ ಸಚಿವರ ಅನುಮೋದನೆಯನ್ನು ಪಡೆದು ಅದರಂತೆ ಕ್ರಮ ಕೈಗೊಳ್ಳಲು ಸಂಬಂಧಿಸಿದ ಕಡತದೊಂದಿಗೆ ಪ್ರಸ್ತಾವನೆಯನ್ನು ಕಂದಾಯ ಇಲಾಖೆಯ ಭೂಮಾಪನ ಶಾಖೆಗೆ ಕಳುಹಿಸಿರುತ್ತಾರೆ. ಸದರಿ ಪ್ರಕರಣವನ್ನು ಪರಿಶೀಲಿಸಿದ ಸರ್ಕಾರವು ಶ್ರೀ ಜಿ.ಎನ್. ಲಿಂಗಯ್ಯ, ಪ್ರಥಮ ದರ್ಜೆ ಭೂಮಾಪಕರು ಇವರ ಮೇಲೆ ಮಾಡಲಾಗಿದ್ದ ಆರೋಪಗಳು ವಿಚಾರಣೆಯಲ್ಲಿ ಸಾಭೀತಾಗಿರುವುದರಿಂದ ವಿಚಾರಣಾ ವರದಿಯನ್ನು ಒಪ್ಪಿ ಜಲಸಂಪನ್ಮೂಲ ಇಲಾಖೆಯವರು ಮಾಡಿರುವ ಶಿಫಾರಸ್ಸಿನಂತೆ ಸದರಿ ನೌಕರರು ಒಬ್ಬ ನಿವೃತ್ತ ಸರ್ಕಾರಿ ನೌಕರರಾಗಿರುವುದರಿಂದ ಮೇಲೆ (3)ರಲ್ಲಿ ಓದಲಾದ ದಿ: 13.02.2007ರ ಪತ್ರದಲ್ಲಿ ಈ ಬಗ್ಗೆ ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿಯನ್ನು ಕೋರಲಾಗಿತ್ತು. ಮೇಲೆ (4)ರಲ್ಲಿ ಓದಲಾದ ದಿನಾಂಕ: 15.03.2007ರ ಪತ್ರದಲ್ಲಿ ಕರ್ನಾಟಕ ಲೋಕ ಸೇವಾ ಆಯೋಗವು ತನ್ನ ಸಹಮತಿಯನ್ನು ನೀಡಿರುತ್ತದೆ. ಆದುದರಿಂದ ನಿವೃತ್ತರಾಗಿರುವ ಈ ನೌಕರರಿಗೆ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 1958ರ ನಿಯಮ 214(1) (ಎ)ರ ಪ್ರಕಾರ ನೌಕರರ ನಿವೃತ್ತಿ ವೇತನದಲ್ಲಿ ಶೇಕಡ 5ರಷ್ಟು ಮೊತ್ತವನ್ನು ಮೂರು ವರ್ಷದ ಅವಧಿಗೆ ಕಡಿತಗೊಳಿಸುವ ದಂಡನೆಯನ್ನು ವಿಧಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 105 ಭೂದಾಸೇ (3) 2003, ಬೆಂಗಳೂರು, ದಿನಾಂಕ: 09.04.2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಜಿ.ಎನ್. ಲಿಂಗಯ್ಯ, ಪ್ರಥಮ ದರ್ಜೆ ಭೂಮಾಪಕರು (ನಿವೃತ್ತ) ಇವರ ವಿರುದ್ಧ ಮಾಡಲಾಗಿದ್ದ ಆಪಾದನೆಗಳು ವಿಚಾರಣೆಯಲ್ಲಿ ಸಾಭೀತಾಗಿರುವ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 1958ರ ನಿಯಮ 214(1) (ಎ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಜಿ.ಎನ್. ಲಿಂಗಯ್ಯ, ನಿವೃತ್ತ ಪ್ರಥಮ ದರ್ಜೆ ಭೂಮಾಪಕರ ನಿವೃತ್ತಿ ವೇತನದಲ್ಲಿ ಶೇಕಡ 5ರಷ್ಟು ನಿವೃತ್ತಿ ವೇತನವನ್ನು ಮೂರು ವರ್ಷಗಳ ಅವಧಿಗೆ ಕಡಿತಗೊಳಿಸುವ ದಂಡನೆಯನ್ನು ವಿಧಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 673

**ಎಸ್.ಕೆ. ಪುರುಷೋತ್ತಮ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂಮಾಪನ)

**ವಿಷಯ:** ಶ್ರೀ ವಿ. ಪ್ರಸನ್ನಕುಮಾರ್, ಭೂದಾಖಲೆಗಳ ಉಪ ನಿರ್ದೇಶಕರು ಹಾಗೂ ಶ್ರೀ ಕೆ.ಜಿ. ದುಂಡಪ್ಪ, ಅಧೀಕ್ಷಕರು (ತಾಂ) ಅವರ ವಿರುದ್ಧ ಇಲಾಖಾ ವಿಚಾರಣೆ – ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:–**
1. ನೋಟೀಸ್ ಸಂ.ಕಂಇ 26 ಭೂದಾಸೇ (1) 2001 ದಿ: 22.9.2001
2. ಶ್ರೀ ವಿ. ಪ್ರಸನ್ನಕುಮಾರ್, ಭೂ.ಉ.ನಿ. ಅವರ ದಿ: 31.12.2001ರ ಲಿಖಿತ ಹೇಳಿಕೆ.
3. ಶ್ರೀ ಕೆ.ಜಿ. ದುಂಡಪ್ಪ, ಅಧೀಕ್ಷಕರು (ತಾಂ) ರವರ ದಿ: 5.11.2001ರ ಲಿಖಿತ ಹೇಳಿಕೆ.

**ಪ್ರಸ್ತಾವನೆ:**

ಶ್ರೀ ಪ್ರಸನ್ನಕುಮಾರ್, ಭೂದಾಖಲೆಗಳ ಉಪನಿರ್ದೇಶಕರು ಹಾಗೂ ಶ್ರೀ ಕೆ.ಜಿ. ದುಂಡಪ್ಪ, ಅಧೀಕ್ಷಕರು (ತಾಂತ್ರಿಕ)ರವರು ಈ ಹಿಂದೆ ದಿನಾಂಕ: 8.6.95 ರಿಂದ 11.7.2000 ರವರೆಗೆ ಕ್ರಮವಾಗಿ ಭೂದಾಖಲೆಗಳ ಉಪ ನಿರ್ದೇಶಕರು, ಮಂಗಳೂರು ವಿಭಾಗ, ಮಂಗಳೂರು ಹಾಗೂ ಭೂದಾಖಲೆಗಳ ಸಹಾಯಕ ನಿರ್ದೇಶಕರ ಕಛೇರಿ, ಮಡಿಕೇರಿ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಮಡಿಕೇರಿ ತಾಲ್ಲೂಕು, ಭಾಗಮಂಡಲ ಹೋಬಳಿ, ಬೆಟ್ಟತ್ತೂರು ಗ್ರಾಮದ ಸ.ನಂ. 1/24ಎ ಮತ್ತು 1/21ಬಿ ಇವುಗಳ ಗ್ರಾಮ ನಕಾಶೆಯಲ್ಲಿ ತಪ್ಪಾಗಿ ಪ್ಲಾಟ್ ಮಾಡಿ ಅದನ್ನಾಧರಿಸಿ ಮರ ಕಡಿತಲೆ ಮಾಡಲು ಜಂಟಿ ಅಳತೆ ನಕ್ಷೆಗೆ ಸಹಿ ಮಾಡಿ ಅರ್ಜಿದಾರರಿಗೆ ಅನುಕೂಲ ಮಾಡಿಕೊಡುವ ಉದ್ದೇಶ ಹೊಂದಿ ಕರ್ನಾಟಕ ಸರ್ಕಾರಿ ಸೇವಾ (ನಡತೆ) ನಿಯಮಾವಳಿಗಳು 1966 ರ ನಿಯಮ–3(i) ಹಾಗೂ (iii) ನ್ನು ಉಲ್ಲಂಘಿಸಿದ ಆರೋಪಗಳಿಗಾಗಿ ಶ್ರೀ ವಿ. ಪ್ರಸನ್ನಕುಮಾರ್, ಭೂದಾಖಲೆಗಳ ಉಪ ನಿರ್ದೇಶಕರು, ಭುಮಾಪನ ಇಲಾಖೆ ಹಾಗೂ ಶ್ರೀ ಕೆ.ಜಿ. ದುಂಡಪ್ಪ, ಅಧೀಕ್ಷಕರು (ತಾಂ) ಇವರುಗಳು ಮೇಲೆ (1)ರಲ್ಲಿ ಓದಲಾದ ದಿನಾಂಕ: 22.9.2001 ನೋಟೀಸನ್ನು ಜಾರಿ ಮಾಡಿ ಸಮಜಾಯಿಷಿ ಕೇಳುವ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ನೋಟೀಸಿಗೆ ಮೇಲೆ (2) ಮತ್ತು (3)ರಲ್ಲಿ ಓದಲಾದ ದಿನಾಂಕ: 31.12.2001 ಹಾಗೂ 5.11.2001ರ ಲಿಖಿತ ಉತ್ತರ ಸಲ್ಲಿಸಿದ ಆರೋಪಿತ ಅಧಿಕಾರಿ/ನೌಕರರು ತಮ್ಮ ಮೇಲೆ ಹೊರಿಸಲಾದ ದೋಷಾರೋಪಣೆಯನ್ನು ನಿರಾಕರಿಸಿರುತ್ತಾರೆ. ಆದ್ದರಿಂದ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ಸರ್ಕಾರವು ತೀರ್ಮಾನಿಸಿ ಸರ್ಕಾರಿ ಆದೇಶ ಸಂ. ಕಂಇ 26 ಭೂದಾಸೇ (1) 2001 ಬೆಂಗಳೂರು ದಿ: 21.1.2002ರಲ್ಲಿ ಶ್ರೀ ಕೆ. ಈಶ್ವರಭಟ್, ನಿವೃತ್ತ ಜಿಲ್ಲಾ ಸೆಷನ್ಸ್ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಗಳಾಗಿ ನೇಮಕ ಮಾಡಲಾಗಿತ್ತು. ಆದರೆ, ಶ್ರೀಯುತರು ವಿಳಾಸದಲ್ಲಿಲ್ಲ ಎಂದು ದಾಖಲೆಗಳು ಹಿಂದಿರುಗಿ ಬಂದಿರುತ್ತದೆ. ನಂತರ ಸರ್ಕಾರಿ ಆದೇಶ ಸಂ. ಕಂಇ 56 ಭೂದಾಸೇ (1) 2001 ಬೆಂಗಳೂರು ದಿ: 8.11.2004ರಲ್ಲಿ ಶ್ರೀ ಎಂ.ಜಿ. ಇಂದ್ರಕುಮಾರ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಗಳಾಗಿ ನೇಮಕ ಮಾಡಲಾಗಿತ್ತು.

ಆದರೆ ಶ್ರೀ ಎಂ.ಜೆ. ಇಂದ್ರಕುಮಾರ್ ರವರು ಸದರಿ ವಿಚಾರಣೆಯನ್ನು ತಮ್ಮಿಂದ ತೆಗೆದುಕೊಳ್ಳಲು ಸಾಧ್ಯವಾಗದಿರುವುದರಿಂದ ಬೇರೆಯವರಿಗೆ ವಹಿಸಿಕೊಡಲು ಸೂಚಿಸಿರುತ್ತಾರೆ. ಸರ್ಕಾರಿ ಆದೇಶ ಸಂ. ಕಂಇ 26 ಭೂದಾಸೇ (1)2001 ಬೆಂಗಳೂರು ದಿ: 23.7.2004ರಲ್ಲಿ ಶ್ರೀ ವಿ.ಎನ್. ಕುಲಕರ್ಣಿ, ನಿವೃತ್ತ ಜಿಲ್ಲಾ ನ್ಯಾಯಾಧೀಶಕರನ್ನು ನೇಮಕ ಮಾಡಲಾಗಿತ್ತು. ಆದರೆ ಸದರಿಯವರು ಸಹ ವಿಳಾಸದಲ್ಲಿರುವುದಿಲ್ಲವೆಂದು ತಿಳಿಸಲಾಗಿದೆ. ಸರ್ಕಾರಿ ಆದೇಶ ಸಂ. ಕಂಇ 26 ಭೂದಾಸೇ (1) 2001 ದಿ: 15.6.2007ರಲ್ಲಿ ಶ್ರೀ ಎನ್.ಎಸ್. ಸಂಗೊಳ್ಳಿ ನಿವೃತ್ತ ಜಿಲ್ಲಾ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಗಳಾಗಿ ನೇಮಕ ಮಾಡಲಾಗಿತ್ತು. ಆದರೆ ಶ್ರೀಯುತರು ವೈಯಕ್ತಿಕ ಕಾರಣಗಳಿಂದಾಗಿ ವಿಚಾರಣೆಯನ್ನು ನಡೆಸಲು ಸಾಧ್ಯವಾಗುವುದಿಲ್ಲವೆಂದು ದಿನಾಂಕ: 18.07.2007ರ ಪತ್ರದಲ್ಲಿ ತಿಳಿಸಿದ್ದಾರೆ. ಆದುದರಿಂದ ಮೇಲ್ಕಂಡ 4 ಸರ್ಕಾರಿ ಆದೇಶಗಳನ್ನು ರದ್ದುಗೊಳಿಸಿ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11ನೇ ಉಪ ನಿಯಮ (22)ರೊಂದಿಗೆ ಓದಿಕೊಂಡಂತೆ ಉಪ ನಿಯಮ (2)ರಂತೆ ಪ್ರಸ್ತುತ ಪ್ರಕರಣದಲ್ಲಿ ಸರ್ಕಾರವು ಶ್ರೀ ಎಸ್. ಇಂಧುದರ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಬೆಂಗಳೂರು ರವರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಿಸಲು ಉದ್ದೇಶಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 26 ಭೂದಾಸೇ (1) 2001**

**ಬೆಂಗಳೂರು, ದಿನಾಂಕ: 21.9.2007**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957 ರ ನಿಯಮ 11(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಎಸ್.ಇಂಧುದರ, ನಿವೃತ್ತ ಜಿಲ್ಲಾ ಸೆಷನ್ಸ್ ನ್ಯಾಯಾಧೀಶರು, ನಂ.8, 15ನೇ ಕ್ರಾಸ್, 5ನೇ ಹಂತ, ಜೆ.ಪಿ.ನಗರ, ಬೆಂಗಳೂರು–560 078 ಇವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸಲಾಗಿದೆ. ಈ ವಿಚಾರಣೆಗಾಗಿ ಅವರು ಸರ್ಕಾರಿ ಆದೇಶ ಸಂ. ಸಿಆಸುಇ 16 ಸೇಇವಿ 2005 ದಿನಾಂಕ: 23.8.2005 ರಂತೆ ರೂ. 6,000/– (ಆರು ಸಾವಿರ ರೂಪಾಯಿಗಳು ಮಾತ್ರ) ಗೌರವಧನ ಹಾಗೂ ಸರ್ಕಾರಿ ಆದೇಶ ಸಂ. ಸಿಆಸುಇ 45 ಸೇಇವಿ 2001 ದಿನಾಂಕ: 4.3.2002ರಂತೆ ರೂ.1000/– (ಒಂದು ಸಾವಿರ ರೂಪಾಯಿಗಳು ಮಾತ್ರ) ವಾಹನ ಭತ್ಯೆಯನ್ನು ಪಡೆಯುತ್ತಾರೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಭೂದಾಖಲೆಗಳ ಜಂಟಿ ನಿರ್ದೇಶಕರು, ಭೂಮಾಪನ ಮತ್ತು ಭೂದಾಖಲೆಗಳ

ಇಲಾಖೆ, ಮೈಸೂರು ರವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸಿದೆ. ವಿಚಾರಣಾಧಿಕಾರಿಗಳಿ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ ಇತ್ಯಾದಿಗಳನ್ನು ಒದಗಿಸಲು ಆಯುಕ್ತರು, ಭೂಮಾಪನ ಇಲಾಖೆ, ಬೆಂಗಳೂರು ರವರು ಕ್ರಮ ಕೈಗೊಳ್ಳುವುದು. ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1724

**ಎಸ್.ಬಿ. ಸಸಾಲಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂಮಾಪನ)

**ಸುತ್ತೋಲೆ**

**ಸಂಖ್ಯೆ: ಆರ್‌ಡಿ 64 ಎಂ.ಎಸ್.ಟಿ. 2007 ಬೆಂಗಳೂರು, ದಿನಾಂಕ: 26ನೇ ಮಾರ್ಚ್ 2007**

**ವಿಷಯ:** ರಾಜ್ಯದ ಜಿಲ್ಲಾಧಿಕಾರಿಗಳು ಪ್ರವಾಸ ಕೈಗೊಂಡಿದ್ದ ಸಮಯದಲ್ಲಿ ಸಾರ್ವಜನಿಕರ ಕುಂದುಕೊರತೆಗಳನ್ನು ಪರಿಶೀಲಿಸುವ ಬಗ್ಗೆ.

ದಿನಾಂಕ: 21.2.2007ರಂದು ಅಪರ ಮುಖ್ಯ ಕಾರ್ಯದರ್ಶಿಗಳು ಹಾಗೂ ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ನಡೆದ ಆಹಾರ ಭದ್ರತಾ ಯೋಜನೆಗಳ ಕುರಿತು ಜರುಗಿಸಲಾದ ಸಭೆಯಲ್ಲಿ ರಾಜ್ಯದ ಎಲ್ಲಾ ಜಿಲ್ಲಾಧಿಕಾರಿಗಳು ಅವರ ಜಿಲ್ಲಾ ವ್ಯಾಪ್ತಿಗೆ ಒಳಗೊಂಡಂತೆ ಪ್ರವಾಸ ಕೈಗೊಂಡ ಸಮಯದಲ್ಲಿ ಸಾರ್ವಜನಿಕ ಕುಂದುಕೊರತೆಗಳ ಅರ್ಜಿಗಳ ಬಗ್ಗೆ ಮತ್ತು ಮುಖ್ಯವಾಗಿ ಸರ್ಕಾರದ (Govt. food security schemes) ಆಹಾರ ಧಾನ್ಯಗಳ ರಕ್ಷಣೆ ಯೋಜನೆಗಳ ಬಗ್ಗೆ ಪರಿಶೀಲನೆ ನಡೆಸುವಂತೆಯೂ ಇದರ ಜೊತೆಗೆ ಹಸಿವಿನ ಬಳಲಿಕೆಯಿಂದ (starvation) ಮರಣ ಹೊಂದಿರುವ ವ್ಯಕ್ತಿಗಳ ಅಂಕಿಸಂಖ್ಯೆಗಳನ್ನು ಪರಿಶೀಲನೆ ಮಾಡಿ ಪ್ರತಿ ತಿಂಗಳ ಅಂತ್ಯದೊಳಗೆ ಸರ್ಕಾರಕ್ಕೆ ವರದಿ/ಮಾಹಿತಿಗಳನ್ನು ತಪ್ಪದೇ ಒದಗಿಸುವಂತೆ ಈ ಮೂಲಕ ಸೂಚಿಸಲಾಗಿದೆ.

**ಎಸ್.ಎಂ. ಜಾಮ್‌ದಾರ್**
ಸರ್ಕಾರದ ಪ್ರಧಾನ ಕಾರ್ಯದರ್ಶಿ
ಕಂದಾಯ ಇಲಾಖೆ

ಪಿ.ಆರ್. 617

**ಸುತ್ತೋಲೆ**

**ಸಂಖ್ಯೆ: ಆರ್‌ಡಿ 222 ಟಿಆರ್‌ಎಂ 2007 ಬೆಂಗಳೂರು, ದಿನಾಂಕ: 5.9.2007**

**ವಿಷಯ:** ಗ್ರಾಮೀಣಾ ಪ್ರದೇಶಗಳಲ್ಲಿನ ಎಲ್ಲಾ ಭೂ ದಾಖಲೆಗಳಲ್ಲಿ ಪತಿ ಮತ್ತು ಪತ್ನಿ ಇವರಿಬ್ಬರ ಹೆಸರುಗಳನ್ನು ಕಡ್ಡಾಯವಾಗಿ ನಮೂದಿಸುವ ಬಗ್ಗೆ ಸೂಚನೆ.

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯು ಹಿಂದೂ ಸಕ್ಸೆಷನ್ ಕಾಯ್ದೆ, 1956ರಡಿಯಲ್ಲಿ ದಾಯಾದಿಗಳ ಆಸ್ತಿಯಲ್ಲಿ ಹೆಣ್ಣು ಮಕ್ಕಳಿಗೆ ಸಮಾನ ಹಕ್ಕು ನೀಡುವ ಬಗ್ಗೆ ತಿದ್ದುಪಡಿ ಜಾರಿಗೆ ತರಲಾಗಿದೆ. ಹಿಂದೂ ಸಕ್ಸೆಷನ್ ಕಾಯ್ದೆ, 1956ರ ತಿದ್ದುಪಡಿ ಅನ್ವಯ ಗ್ರಾಮೀಣಾ ಪ್ರದೇಶಗಳಲ್ಲಿ ಇನ್ನು ಮುಂದೆ ಎಲ್ಲಾ ಭೂ ದಾಖಲೆಗಳಲ್ಲಿ ಪತಿ ಮತ್ತು ಪತ್ನಿ ಇಬ್ಬರ ಹೆಸರುಗಳನ್ನು ಕಡ್ಡಾಯವಾಗಿ ನಮೂದಿಸಲು ಸಂಬಂಧಪಟ್ಟ ಎಲ್ಲಾ ಕಂದಾಯ ಅಧಿಕಾರಿಗಳಿಗೆ ಸೂಚಿಸಬೇಕೆಂದು ಜಿಲ್ಲಾಧಿಕಾರಿಗಳಿಗೆ ಈ ಮೂಲಕ ತಿಳಿಸಲಾಗಿದೆ.

**ಎಸ್.ಎಂ. ಜಾಮ್‌ದಾರ್**
ಸರ್ಕಾರದ ಪ್ರಧಾನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂಕಂದಾಯ)

ಪಿ.ಆರ್. 1719

**ಸೇರ್ಪಡೆ**

**ಸಂಖ್ಯೆ: ಆರ್‌ಡಿ 15 ಐಯುಡಿ 2006 ಬೆಂಗಳೂರು, ದಿನಾಂಕ: 16ನೇ ಮಾರ್ಚ್ 2007**

ಸರ್ಕಾರಿ ಜಮೀನುಗಳ ಒತ್ತುವರಿಯನ್ನು ತೆರವುಗೊಳಿಸುವ ಉದ್ದೇಶದ ವೆಚ್ಚಕ್ಕಾಗಿ ಲೆಕ್ಕಶೀರ್ಷಿಕೆ 2053–00–800–0–04–059 ಇತರೆ ವೆಚ್ಚಗಳ ಅಡಿಯಲ್ಲಿ ಹಣ ಬಿಡುಗಡೆ ಮಾಡಿ ಹೊರಡಿಸಲಾದ ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 15

ಎಯುಡಿ 2006 ದಿನಾಂಕ: 2.3.2007 ಅನ್ನು ವಿಕಾಸಿಸಿದ ಅಧಿಕಾರಿಗಳಲ್ಲಿ ಈ ಕೆಳಕಂಡ ಇಲಾಖಾ ಮುಖ್ಯಸ್ಥರನ್ನು ಸೇರಿಸಿ ಓದಿಕೊಳ್ಳತಕ್ಕದ್ದು.

**"ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ/ಮೈಸೂರು ವಿಭಾಗ/ ಬೆಳಗಾಂ ವಿಭಾಗ ಗುಲ್ಬರ್ಗಾ ವಿಭಾಗ, ಖಜಾನೆ ನಿರ್ದೇಶಕರು, ವಿಶ್ವೇಶ್ವರಯ್ಯ ಗೋಪುರ, ಬೆಂಗಳೂರು ಮತ್ತು ಎಲ್ಲಾ ಜಿಲ್ಲಾ ಖಜಾನಾಧಿಕಾರಿಗಳು"**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ
**ಎಂ.ಕೆ. ನರಸಿಂಹಲು**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂಸು.ಕೋಶ)

ಪಿ.ಆರ್. 658

**ವಿಷಯ:** ಶ್ರೀ ಶಿವಪ್ಪ ಹಾನಗಲ್, ಹಿಂದಿನ ತಹಶೀಲ್ದಾರ್, ಕುಂದಗೋಳ ಮತ್ತು ಇತರರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವ ಬಗ್ಗೆ.

**ಓದಲಾಗಿದೆ:–** 1. ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 77 ಎಡಿಇ 2004, ದಿನಾಂಕ: 22.12.2006

2. ಜಿಲ್ಲಾಧಿಕಾರಿಗಳು, ಧಾರವಾಡ ಇವರ ಪತ್ರದ ಸಂಖ್ಯೆ: ಸಿಬ್ಬಂದಿ/1/ಇ/ವಹಿ/8/2004–05, ದಿನಾಂಕ: 29.5.2007

**ಪ್ರಸ್ತಾವನೆ:**

ಧಾರವಾಡ ಜಿಲ್ಲೆ, ಕುಂದಗೋಳ ತಾಲ್ಲೂಕು ಕಛೇರಿಯಲ್ಲಿ ವೃದ್ಯಾಪ್ಯ ವೇತನ, ಅಂಗವಿಕಲ ಮಾಸಾಶನ, ವಿಧವಾ ವೇತನಕ್ಕೆ ಸಂಬಂಧಿಸಿದ ಪ್ರಕರಣಗಳು, ಹಕ್ಕು ದಾಖಲಾತಿಗಳಿಗೆ ಸಂಬಂಧಿಸಿದ ಪ್ರಕರಣಗಳು ಹಾಗೂ ಗಣಕೀಕರಣ ವಿಭಾಗದಲ್ಲಿ ಬಾಕಿ ಇರುವ ಹಕ್ಕು ದಾಖಲಾತಿ ಪ್ರಕರಣಗಳನ್ನು ಇತ್ಯರ್ಥಗೊಳಿಸುವ ಬಗ್ಗೆ ಈ ಕೆಳಕಂಡ ಅಧಿಕಾರಿ/ನೌಕರರು ಶೀಘ್ರವಾಗಿ ವಿಲೇವಾರಿ ಮಾಡದೇ ವಿಳಂಬ ಮಾಡಿ ಕರ್ತವ್ಯ ಲೋಪ ಎಸಗಿರುವುದರಿಂದ ಇವರುಗಳ ಮೇಲೆ ಹೊರಡಿಸಿದ ಆರೋಪಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಈ ಇಲಾಖಾ ವಿಚಾರಣೆಯನ್ನು ಜರುಗಿಸಲು ಶ್ರೀ ಬಿ.ಎಸ್. ಪಾಟೀಲ್, ನಿವೃತ್ತ ನ್ಯಾಯಧೀಶರು ಇವರನ್ನು ಮೇಲೆ ಕ್ರ.ಸಂ. (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

1. ಶ್ರೀ ಶಿವಪ್ಪ ಹಾನಗಲ್, ಹಿಂದಿನ ತಹಶೀಲ್ದಾರ್, ಕುಂದಗೋಳ
2. ಶ್ರೀ ಎಸ್.ಎಂ. ದಾನಣ್ಣವರ, ಹಿಂದಿನ ಕಂದಾಯ ನಿರೀಕ್ಷಕ, ಸಂಶಿ.
3. ಶ್ರೀ ಹೆಚ್.ಎಂ. ಕಾಲೇಮದಾರ್, ಹಿಂದಿನ ಕಂದಾಯ ನಿರೀಕ್ಷಕ (ಈಗ ನಿವೃತ್ತರು) ಕುಂದಗೋಳ ತಾಲ್ಲೂಕು.

ಮೇಲೆ ಕ್ರ.ಸಂ. (2)ರಲ್ಲಿ ಓದಲಾದ ಜಿಲ್ಲಾಧಿಕಾರಿಗಳು, ಧಾರವಾಡ ಇವರ ಪತ್ರದಲ್ಲಿ ಈ ಪ್ರಕರಣದಲ್ಲಿ ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿದ್ದ ಶ್ರೀ ಬಿ.ಎಸ್. ಪಾಟೀಲ್, ನಿವೃತ್ತ ನ್ಯಾಯಾಧೀಶರು ಇವರು ದಿನಾಂಕ: 25.6.2001 ರಂದು ಮರಣ ಹೊಂದಿರುವುದಾಗಿ ತಿಳಿಸಿರುವ ಹಿನ್ನೆಲೆಯಲ್ಲಿ ಶ್ರೀ ಬಿ.ಎಸ್. ಪಾಟೀಲ್ ಇವರ ಬದಲಿಗೆ ಬೇರೊಬ್ಬ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯಾಗಿ ನೇಮಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಆರ್‌ಡಿ 77 ಎಡಿಇ 2004, ಬೆಂಗಳೂರು ದಿನಾಂಕ: 21.9.2007**

ಪ್ರಸ್ತಾವನೆಯಲ್ಲಿ ಕೂಲಂಕುಷವಾಗಿ ಪರಿಶೀಲಿಸುವ ಹಿನ್ನೆಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 13ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ದಿವಂಗತ ಶ್ರೀ ಬಿ.ಎಸ್. ಪಾಟೀಲ್ ಇವರ ಬದಲಿಗೆ ಶ್ರೀ ಶೋನಲೆ ಇಂದುಧರ್, ನಿವೃತ್ತ ಜಿಲ್ಲಾ ಮತ್ತು ಸೆಷನ್ ನ್ಯಾಯಾಧೀಶರು, ನಂ. 8, 15ನೇ ಅಡ್ಡರಸ್ತೆ, 5ನೇ ಫೇಸ್, ಜೆ.ಪಿ. ನಗರ, ಬೆಂಗಳೂರು–560 078 ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ. ಹಾಗೂ ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಧಾರವಾಡ ಜಿಲ್ಲಾಧಿಕಾರಿ ಕಛೇರಿಯ ಕೇಂದ್ರಸ್ಥಾನಿಕ ಸಹಾಯಕರನ್ನು ಪ್ರಕರಣದ ಮಂಡನಾಧಿಕಾರಿಯನ್ನಾಗಿ ಮುಂದುವರೆಸಿದೆ.

ವಿಚಾರಣಾಧಿಕಾರಿಗಳು ಈ ಪ್ರಕರಣದ ವಿಚಾರಣೆಯನ್ನು ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಯವರ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಿದ ಸ್ಥಳದಲ್ಲಿ ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಮಾಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಜಿಲ್ಲಾಧಿಕಾರಿಗಳು, ಗ್ರಾಮಾಂತರ ಜಿಲ್ಲೆ, ಇವರು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ಸರ್ಕಾರಿ ಆದೇಶ ಸಂ: ಸಿಆಸುಇ 16 ಸೇಇವಿ 2005ರನ್ವಯ ರೂ.6,000/– (ಆರು ಸಾವಿರ ರೂಪಾಯಿಗಳು ಮಾತ್ರ)ಗಳ ಸಂಚಿತ ಸಂಭಾವನೆಯನ್ನು ಸರ್ಕಾರಿ ಆದೇಶ ಸಂ: ಸಿಆಸುಇ 45 ಸೇಇವಿ 2001, ದಿನಾಂಕ: 4.3.2002 ರನ್ವಯ ರೂ.1,000/– (ಒಂದು ಸಾವಿರ ರೂಪಾಯಿಗಳು ಮಾತ್ರ)ಗಳ ವಾಹನ ಭತ್ಯೆ (ಕನ್ವೇಯನ್ಸ್ ಅಲೋಯನ್ಸ್)ಯನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಧಾರವಾಡ ಜಿಲ್ಲಾಧಿಕಾರಿಗಳು ಪಾವತಿಸತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಕರ್ನಾಟಕ ನಾಗರೀಕ ಸೇವಾ (CCA) ನಿಯಮಾವಳಿ ನಿಯಮ 11 ಮತ್ತು 11ಎ ರಲ್ಲಿನ ವಿಧಿವಿಧಾನಗಳನ್ನು ಅನುಸರಿಸಿ, ಜರುಗಿಸಿ ವರದಿಯನ್ನು ಮೂರು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ
**ಬಿ.ವಿ. ಚೌಕಿಮಠ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು–3)

ಪಿ.ಆರ್. 1725

**ವಿಷಯ:** ಶ್ರೀ ಎಂ. ರಾಮದಾಸ್, ಹಿರಿಯ ಕಿರಿಯ ಅಭಿಯಂತರರು, ಕ್ಷೇತ್ರಾಭಿವೃದ್ಧಿ ಅಧಿಕಾರಿಗಳ ಕಾರ್ಯಾಲಯ, ಕೊಪ್ಪಳ ಇವರ ಅಮಾನತ್ತಿನ ಅವಧಿಯನ್ನು ಸಕ್ರಮಗೊಳಿಸುವ ಬಗ್ಗೆ.

**ಓದಲಾಗಿದೆ:–**
1. ಶ್ರೀ ಎಂ. ರಾಮದಾಸ್ ಇವರ ಮನವಿ ದಿನಾಂಕ: 2.7.2007
2. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 28 ಎಡಿಇ 1986, ದಿನಾಂಕ: 2.7.2007

**ಪ್ರಸ್ತಾವನೆ:**

ಶ್ರೀ ರಾಮದಾಸ್, ಕಿರಿಯ ಇಂಜಿನಿಯರ್ ಇವರು ಮೇಲೆ ಓದಲಾದ (1)ರ ತಮ್ಮ ಮನವಿಯಲ್ಲಿ ತಾವು 1985–86ನೇ ಸಾಲಿನಲ್ಲಿ ಕ್ಷೇತ್ರಾಭಿವೃದ್ಧಿ ಅಧಿಕಾರಿಗಳ ಕಛೇರಿ, ಕೊಪ್ಪಳ ಇಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಎನ್.ಆರ್.ಇ.ಪಿ. ಯೋಜನೆಯ ಕಾಮಗಾರಿ ಬಗ್ಗೆ ಇದ್ದ ಆಪಾದನೆಯ ಸಂಬಂಧ ಕರ್ನಾಟಕ ಲೋಕಾಯುಕ್ತದಿಂದ ಇಲಾಖಾ ವಿಚಾರಣೆ ನಡೆಸಲಾಗಿದ್ದು, ತಾವು ಸದರಿ ವಿಚಾರಣೆಯಲ್ಲಿ ಆರೋಪ ಮುಕ್ತರಾಗಿರುವುದರಿಂದ ತಾವು ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಕರ್ತವ್ಯದ ಅವಧಿಯೆಂದು ಪರಿಗಣಿಸಲು ಮೇಲೆ ಓದಲಾದ (1)ರ ಮನವಿಯಲ್ಲಿ ಕೋರಿರುತ್ತಾರೆ.

ಕ್ಷೇತ್ರಾಭಿವೃದ್ಧಿ ಅಧಿಕಾರಿಗಳ ಕಛೇರಿ, ಕೊಪ್ಪಳ ಇಲ್ಲಿ ಶ್ರೀ ಎ.ಬಿ. ಶಾಸ್ತ್ರಿ ಹಿಂದಿನ ಕ್ಷೇತ್ರಾಭಿವೃದ್ಧಿ ಅಧಿಕಾರಿ, ಶ್ರೀ ಎಂ.ರಾಮದಾಸ್ ಇವರು ಕಿರಿಯ ಇಂಜಿನಿಯರ್ ಆಗಿ ಕಾರ್ಯ ನಿರ್ವಹಿಸುತ್ತಿದ್ದಾಗ ಎನ್.ಆರ್.ಇ.ಪಿ ಕಾಮಗಾರಿಗಳನ್ನು ಅನುಷ್ಠಾನಗೊಳಿಸುವಾಗ ಆಗಿದ್ದ ಅವ್ಯವಹಾರಕ್ಕೆ ಸಂಬಂಧಿಸಿದಂತೆ, ಆಗಿನ ವಿಭಾಗಾಧಿಕಾರಿಗಳು, ಗುಲ್ಬರ್ಗಾ ಇವರ ಆದೇಶ ಸಂಖ್ಯೆ: ಸಿಸಿಬಿ/33/85, ದಿನಾಂಕ: 3.12.1985ರಂದು ಸೇವೆಯಿಂದ ಅಮಾನತ್ತು ಮಾಡಿರುತ್ತಾರೆ. ಸದರಿಯವರನ್ನು ದಿನಾಂಕ : 10.12.1985 ರಿಂದ ಸೇವೆಯಿಂದ ಬಿಡುಗಡೆಗೊಳಿಸಲಾಗಿದೆ. ನಂತರ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಅಧಿಕೃತ ಜ್ಞಾಪನ ಸಂಖ್ಯೆ: ಆರ್‌ಡಿಪಿ 2 ಇಎನ್‌ಕ್ಯೂ 86, ದಿನಾಂಕ: 20.6.1986ರಲ್ಲಿ ಶ್ರೀ ಎಂ. ರಾಮದಾಸ್ ಇವರನ್ನು ನಿಲಂಬನದಿಂದ ವಿಮುಕ್ತಗೊಳಿಸಿ ಕೆಲಸಕ್ಕೆ ಪುನರ್ ನೇಮಕ ಮಾಡಲಾಗಿದೆ. ಈ ಅಧಿಕಾರಿ/ನೌಕರರ ಮೇಲೆ ಲೋಕಾಯುಕ್ತದಲ್ಲಿದ್ದ ವಿಚಾರಣೆ ಪಡೆದು ಲೋಕಾಯುಕ್ತರವರ ವರದಿಯ ಆಧಾರದ ಹಿನ್ನೆಲೆಯಲ್ಲಿ ಮೇಲೆ ಓದಲಾದ (2)ರ ಆದೇಶದಲ್ಲಿ ಆಪಾದನೆಗಳಿಂದ ದೋಷಮುಕ್ತರನ್ನಾಗಿ ಮಾಡಿ ಆದೇಶಿಸಲಾಗಿದೆ. ಸದರಿಯವರು ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಸಕ್ರಮಗೊಳಿಸಬೇಕಾಗಿರುವುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂ: ಆರ್‌ಡಿ 31 ಎಡಿಇ 2007, ಬೆಂಗಳೂರು ದಿನಾಂಕ: 18.9.2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಎಂ. ರಾಮದಾಸ್, ಹಿಂದಿನ ಕಿರಿಯ ಅಭಿಯಂತರರು, ಕ್ಷೇತ್ರಾಭಿವೃದ್ಧಿ ಅಧಿಕಾರಿಗಳ ಕಾರ್ಯಾಲಯ, ಕೊಪ್ಪಳ ಪ್ರಸ್ತುತ ಕಿರಿಯ ಅಭಿಯಂತರರು ಕಾರ್ಯ ನಿರ್ವಹಣಾ ಅಭಿಯಂತರರ ಕಛೇರಿ, ಹೊನ್ನಾವರ, ಉತ್ತರ ಕನ್ನಡ ಜಿಲ್ಲೆ ಇವರು ಅಮಾನತ್ತಿನಲ್ಲಿ ಕಳೆದ ಅವಧಿ ದಿನಾಂಕ: 10.12.1985 ರಿಂದ 20.6.1986ರ ವರೆಗಿನ ಅವಧಿಯನ್ನು ಕೆ.ಸಿ.ಎಸ್.ಆರ್. ನಿಯಮ 100 (1) (ಬಿ) ರನ್ವಯ ಕರ್ತವ್ಯದ ಅವಧಿಯೆಂದು ಪರಿಗಣಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ
**ಬಿ.ವಿ. ಚೌಕಿಮಠ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು–3)

ಪಿ.ಆರ್. 1714

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ಪಿ. ಸುಬ್ಬಾ, ಹಿಂದಿನ ತಹಶೀಲ್ದಾರ್, ಹುಣಸೂರು ತಾಲ್ಲೂಕು ಪ್ರಸ್ತುತ ತಹಶೀಲ್ದಾರ್ ಕೊಳ್ಳೇಗಾಲ ತಾಲ್ಲೂಕು ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಬಗ್ಗೆ.

**ಓದಲಾಗಿದೆ:-** 1. ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 49 ಎಡಿಇ 2005, (ಭಾಗ-1) ದಿನಾಂಕ: 5.3.2007

2. ಶ್ರೀ ಪಾಲನೇತ್ರ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರ ಮನವಿ ದಿನಾಂಕ: 15.3.2007.

**ಪ್ರಸ್ತಾವನೆ:**

ಶ್ರೀ ಪಿ. ಸುಬ್ಬಾ, ತಹಶೀಲ್ದಾರ್, ಕೊಳ್ಳೇಗಾಲ ತಾಲ್ಲೂಕು ಇವರು ಹಿಂದೆ ಹುಣಸೂರು ತಾಲ್ಲೂಕಿನಲ್ಲಿ ತಹಶೀಲ್ದಾರರಾಗಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಹುಣಸೂರು ತಾಲ್ಲೂಕು ಕಛೇರಿಯ ಪಿ.ಡಿ. ಅಕೌಂಟ್‌ನಿಂದ 2005ರ ಮಾರ್ಚ್ ಮಾಹೆಯಲ್ಲಿ ರೂ.3.00 ಲಕ್ಷಗಳ ಮೊಬಲಗನ್ನು ಮೇಲಾಧಿಕಾರಿಗಳ ಆದೇಶವಿಲ್ಲದೆ ನಗದೀಕರಿಸಿದ್ದು, ಮತ್ತು ಇದೇ ಅವಧಿಯಲ್ಲಿ ಉಪವಿಭಾಗಾಧಿಕಾರಿ ಹಾಗೂ ಸಕ್ಷಮ ಪ್ರಾಧಿಕಾರದಿಂದ ಅನುಮತಿ ಪಡೆಯದೇ 1961ರ ಕರ್ನಾಟಕ ಭೂ ಸುಧಾರಣಾ ಕಾಯ್ದೆ ಕಲಂ 79(ಎ) ಮತ್ತು 79(ಬಿ) ಅನ್ನು ಉಲ್ಲಂಘಿಸಿ ತಮ್ಮ ಪತ್ನಿ ಶ್ರೀಮತಿ ರತ್ನಮ್ಮ ಬಿನ್ ಕುಟ್ಟಪ್ಪನ್, ಮಗಳು ಸಂಧ್ಯಾ ಕೋಂ ಸುರೇಶ, ನಾದಿನಿ ಪ್ರೇಮ ಕೋಂ ತಿಪ್ಪೇಸ್ವಾಮಿ, ಬಾವಮೈದ ಬಾಲಕೃಷ್ಣ ಬಿನ್ ಕುಟ್ಟಪ್ಪನ್ ಇವರುಗಳಿಗೆ ಕೃಷಿ ಕಾರ್ಮಿಕ ದೃಢೀಕರಣ ಪತ್ರಗಳನ್ನು ಸೃಷ್ಟಿಸಿ, ಇವರುಗಳ ಹೆಸರುಗಳಲ್ಲಿ ಹುಣಸೂರು ತಾಲ್ಲೂಕು ಕಿರಜಾಜಿ ಗ್ರಾಮದ ಸ.ನಂ. 101 ರಲ್ಲಿ 11 ಎಕರೆ 0.09 ಗುಂಟೆ ಜಮೀನನ್ನು 5,92,000/- ರೂ.ಗಳಿಗೆ ಅಕ್ರಮವಾಗಿ ಖರೀದಿಸಲು ಅವಕಾಶವನ್ನು ಕಲ್ಪಿಸಿಕೊಟ್ಟಿರುತ್ತಾರೆಂದು ಹಾಗೂ ಶ್ರೀಯುತರು ಈ ಹಿಂದೆ ಹುಣಸೂರು ತಾಲ್ಲೂಕಿನಲ್ಲಿ ತಹಶೀಲ್ದಾರರಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಹುಣಸೂರು ತಾಲ್ಲೂಕು ಕಿರಿಜಾಜಿ ಗ್ರಾಮದ ಸ.ನಂ. 101 ರಲ್ಲಿ 11 ಎಕರೆ 0.09 ಗುಂಟೆ ಜಮೀನನ್ನು ತಮ್ಮ ಪತ್ನಿ ರತ್ನಮ್ಮ ಬಿನ್ ಕುಟ್ಟಪ್ಪನ್ ಮಗಳು ಸಂಧ್ಯಾ ಕೋಂ ಸುರೇಶ್, ನಾದಿನಿ ಪ್ರೇಮ ಕೋಂ ತಿಪ್ಪೇಸ್ವಾಮಿ, ಭಾವಮೈದ ಬಾಲಕೃಷ್ಣ ಬಿನ್ ಕುಟ್ಟಪ್ಪನ್ ಇವರುಗಳ ಹೆಸರಿನಲ್ಲಿ ದಿನಾಂಕ: 7.4.2005 ರಂದು ಖರೀದಿ ಮಾಡಿದ ನಂತರ ಹುಣಸೂರು ಉಪನೊಂದಣಾಧಿಕಾರಿಗಳಿಂದ ದಿನಾಂಕ 3.5.2005 ರಂದು ಸ್ವೀಕೃತವಾದ "ಜೆ ಮ್ಯೂಟೇಷನ್‌ಗಳ ಸಂಬಂಧವಾಗಿ ದಿನಾಂಕ: 4.5.2005 ರಂದು ಅಧಿಕೃತ ಜ್ಞಾಪನ ಹೊರಡಿಸಿ, ಹುಣಸೂರು ತಾಲ್ಲೂಕು ಕಿರಜಾಜಿ ಗ್ರಾಮದ ಸ.ನಂ. 101 ರಲ್ಲಿ 11 ಎಕರೆ 0.09 ಗುಂಟೆ ಜಮೀನು, 1961ರ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 79 (ಎ) ಮತ್ತು (ಬಿ)ಯನ್ನು ಉಲ್ಲಂಘನೆಯಾಗಿಲ್ಲವೆಂದೂ ಕಿರಿಜಾಜಿ ಜಮೀನಿನ ವ್ಯಾಪ್ತಿಯಲ್ಲಿ ಬರುವ ಕಸಬಾ ಹೋಬಳಿ ರಾಜಸ್ವ ನಿರೀಕ್ಷಕರಿಗೆ ಸೂಚನೆ ನೀಡಿ, ರಾಜಸ್ವ ನಿರೀಕ್ಷಕರಿಂದ ದಿನಾಂಕ: 4.5.2005 ರಂದೇ ಖರೀದಿದಾರರ ಹೆಸರಿಗೆ ಖಾತೆ ಬದಲಾವಣೆ ಆದೇಶ ಹೊರಡಿಸಿ ಸಂಬಂಧಪಟ್ಟ ಜಮೀನಿನ ಆರ್‌ಟಿಸಿಯಲ್ಲಿ ಖರೀದಿದಾರರಾದ, ತಮ್ಮ ಪತ್ನಿ ರತ್ನಮ್ಮ ಬಿನ್ ಕುಟ್ಟಪ್ಪನ್, ಮಗಳು ಸಂಧ್ಯಾ ಕೋಂ ಸುರೇಶ, ನಾದಿನಿ ಪ್ರೇಮ ಕೋಂ ತಿಪ್ಪೇಸ್ವಾಮಿ, ಬಾಮೈದ ಬಾಲಕೃಷ್ಣ ಬಿನ್ ಕುಟ್ಟಪ್ಪನ್ ಇವರುಗಳ ಹೆಸರಿನಲ್ಲಿ ಆರ್‌ಟಿಸಿ ಇಂಡೀಕರಣ ಮಾಡಿಸಿ, ಕರ್ತವ್ಯಲೋಪವೆಸಗಿ 1966ರ ಕರ್ನಾಟಕ ಸರ್ಕಾರಿ ಸೇವಾ (ನಡತೆ) ನಿಯಮಾವಳಿಗಳ ನಿಯಮ 3(i) (ii) (iii) ಅನ್ನು ಉಲ್ಲಂಘಿಸಿರುತ್ತಾರೆ ಎಂಬ ಆರೋಪಗಳ ಮೇಲೆ ಇಲಾಖಾ ವಿಚಾರಣೆ ಜರುಗಿಸಲು ಮೇಲೆ ಓದಲಾದ ಕ್ರ.ಸಂ. (1)ರ ದಿನಾಂಕ: 5.3.2007ರ ಆದೇಶದಲ್ಲಿ ಶ್ರೀ ಪಾಲನೇತ್ರ, ನಿವೃತ್ತ ಜಿಲ್ಲಾ ಮತ್ತು ಸತ್ರಯ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಕೇಂದ್ರಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಮೈಸೂರು ಇವರನ್ನು ಮಂಡನಾಧಿಕಾರಿಯಾಗಿ ನೇಮಿಸಲಾಗಿತ್ತು.

ಪ್ರಸ್ತುತ ಮೇಲೆ ಓದಲಾದ ಕ್ರ.ಸಂ. (2)ರಲ್ಲಿ ವಿಚಾರಣಾಧಿಕಾರಿಗಳಾದ ಶ್ರೀ ಪಾಲನೇತ್ರ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಇವರು ತಮಗೆ ಆರೋಗ್ಯ ಸರಿಯಿಲ್ಲದ ಕಾರಣ ಇಲಾಖಾ ವಿಚಾರಣೆಯನ್ನು ನಡೆಸಲು ಸಾಧ್ಯವಾಗುವುದಿಲ್ಲವೆಂದು ತಿಳಿಸಿರುತ್ತಾರೆ. ಸರ್ಕಾರವು ನಿವೃತ್ತ ನ್ಯಾಯಾಧೀಶರ ಮನವಿಯನ್ನು ಪರಿಗಣಿಸಿ ಈ ಕೆಳಕಂಡಂತೆ ವಿಚಾರಣಾಧಿಕಾರಿಯನ್ನು ಬದಲಾಯಿಸಿ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಆರ್‌ಡಿ 49 ಎಡಿಇ 2005 (ಭಾಗ-1), ಬೆಂಗಳೂರು ದಿನಾಂಕ: 9.4.2007**

ಪ್ರಸ್ತಾವನೆಯಲ್ಲಿ ಪರಿಶೀಲಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರದ ಆದೇಶ ಸಂ: ಆರ್‌ಡಿ 49 ಎಡಿಇ 2005 (ಭಾಗ-1) ದಿನಾಂಕ: 5.3.2007ರಲ್ಲಿ ಆದೇಶಿಸಿರುವ ಇಲಾಖಾ ವಿಚಾರಣೆ ನಡೆಸಲು ನಿಯೋಜಿಸಲಾಗಿದ್ದ ವಿಚಾರಣಾಧಿಕಾರಿಗಳಾದ ಶ್ರೀ ಪಾಲನೇತ್ರ, ನಿವೃತ್ತಾ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರ ಬದಲಾಗಿ ಶ್ರೀ ಕೆ.ಎನ್. ನಾಗೇಂದ್ರಕುಮಾರ್, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ನಂ: 33ನೇ ಮನೆ, 16ನೇ ಅಡ್ಡರಸ್ತೆ, 6ನೇ ಹಂತ,

ಜೆ.ಪಿ.ನಗರ, ಬೆಂಗಳೂರು–560 078 ಇವರನ್ನು ಈ ಪ್ರಕರಣದಲ್ಲಿ ವಿಚಾರಣಾಧಿಕಾರಿಗಳನ್ನಾಗಿ ನೇಮಿಸಿ ಆದೇಶಿಸಿದೆ. ಉಳಿದ ಎಲ್ಲಾ ಅಂಶಗಳೂ ದಿನಾಂಕ: 5.3.2007ರ ಆದೇಶದಲ್ಲಿರುವಂತೆ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ
**ಆರ್. ಶ್ರೀಮತಿ ಚಂದ್ರಶೇಖರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು–3)

ಪಿ.ಆರ್. 622

**ವಿಷಯ:** ಶ್ರೀ ದಾದರಾವ್, ಹಿಂದಿನ ತಹಶೀಲ್ದಾರ್, ಕೋಲಾರ ತಾಲ್ಲೂಕು, ಕೋಲಾರ ಜಿಲ್ಲೆ ಮತ್ತಿತರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ – ಶ್ರೀ ಎಂ.ಎನ್. ಸತೀಶ್‌ಕುಮಾರ್, ಗ್ರಾಮಲೆಕ್ಕಿಗರು ಮತ್ತು ಶ್ರೀ ಕೆ.ವಿ. ಚಂಗಲರಾಯಪ್ಪ, (ನಿವೃತ್ತ) ಪ್ರಥಮ ದರ್ಜೆ ಸಹಾಯಕರು, ಇವರನ್ನು ದೋಷಮುಕ್ತರನ್ನಾಗಿಸುವ ಬಗ್ಗೆ.

**ಓದಲಾಗಿದೆ:–** 1. ಕೋಲಾರ ಜಿಲ್ಲಾಧಿಕಾರಿಗಳ ಪತ್ರ ಸಂಖ್ಯೆ: ಇಎಸ್‌ಟಿ (1): ಸಿ.ಆರ್.:59/2004–05, ದಿನಾಂಕ: 29.6.2004

2. ವಿಚಾರಣಾಧಿಕಾರಿಗಳನ್ನು ನೇಮಕ ಮಾಡಿರುವ ಆದೇಶ ಸಂಖ್ಯೆ: ಆರ್.ಡಿ. 44 ಎಡಿಇ 2004, ದಿನಾಂಕ:8.8.2005

3. ವಿಚಾರಣಾಧಿಕಾರಿಗಳ ವರದಿ ದಿನಾಂಕ: 27.6.2006

**ಪ್ರಸ್ತಾವನೆ:**

ಕೋಲಾರ ತಾಲ್ಲೂಕು ಸುಗಟೂರು ಹೋಬಳಿ ಕೆಂಬತ್ತನಹಳ್ಳಿ ಗ್ರಾಮ ಸರ್ಕಾರಿ ಖರಾಬು ಜಮೀನು 8ರಲ್ಲಿ ಶ್ರೀಮತಿ ಮುನಿಯಮ್ಮ ಕೋಂ ಕೆ.ಜಿ. ಭೈರೇಗೌಡ ಇವರಿಗೆ ನಿಯಮಬಾಹಿರವಾಗಿ ಅನಧಿಕೃತ ಸಾಗುವಳಿ ಸಕ್ರಮೀಕರಣ ಯೋಜನೆಯಡಿ 4 ಎಕರೆ ಜಮೀನನ್ನು ಸಕ್ರಮೀಕರಣಗೊಳಿಸಲು ಸಹಕರಿಸಿ ಕರ್ತವ್ಯಲೋಪ ಎಸಗಿದ ಕೋಲಾರ ತಾಲ್ಲೂಕಿನ ಹಿಂದಿನ ತಹಶೀಲ್ದಾರರಾದ ಶ್ರೀ ದಾದರಾವ್ ಹಾಗೂ ಇನ್ನಿತರೆ 5 ಮಂದಿ ಸಿಬ್ಬಂದಿಯವರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಇವರುಗಳ ವಿರುದ್ಧ ದೋಷಾರೋಪಣೆಗಳನ್ನು ತಯಾರಿಸಿ ಮೇಲೆ ಕ್ರಮ ಸಂಖ್ಯೆ(1)ರಲ್ಲಿ ಓದಲಾದ ದಿನಾಂಕ: 29.6.2004ರ ಪತ್ರದಲ್ಲಿ ಕೋಲಾರ ಜಿಲ್ಲಾಧಿಕಾರಿಯವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದರು. ಅದರಂತೆ, ಆಪಾದಿತ ಅಧಿಕಾರಿ/ನೌಕರರಿಗೆ ಕಾರಣ ಕೇಳುವ ನೋಟೀಸ್ ನೀಡಿ ಅವರಿಂದ ಲಿಖಿತ ಹೇಳಿಕೆ ಪಡೆದು, ಪರಿಶೀಲಿಸಿ, ಹೇಳಿಕೆ ತೃಪ್ತಿಕರವಾಗಿರದ ಕಾರಣ ಈ ಪ್ರಕರಣದ ಸತ್ಯಸತ್ಯತೆಯನ್ನು ತಿಳಿಯಲು ಸರ್ಕಾರವು ಮೇಲೆ ಓದಲಾದ ಕ್ರಮ ಸಂಖ್ಯೆ (2)ರನ್ವಯ ಈ ಕೆಳಕಂಡ ಆಪಾದಿತ ಅಧಿಕಾರಿ/ನೌಕರರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿ ನಿಯಮ 13ರಡಿ ಜಂಟಿ ಇಲಾಖಾ ವಿಚಾರಣೆ ಜರುಗಿಸಲು ಶ್ರೀ ಲಕ್ಷ್ಮೀನರಸಿಂಹಯ್ಯ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

1. ಶ್ರೀ ದಾದರಾವ್, ಹಿಂದಿನ ತಹಶೀಲ್ದಾರ್, ಕೋಲಾರ ತಾಲ್ಲೂಕು, ಕೋಲಾರ ಜಿಲ್ಲೆ
2. ಶ್ರೀ ಶ್ರೀನಿವಾಸ್, ಶಿರಸ್ತೇದಾರ್, (ಪ್ರಸ್ತುತ ನಿವೃತ್ತ)
3. ಶ್ರೀ ಗಂಗಯ್ಯ, ರಾಜಸ್ವ ನಿರೀಕ್ಷಕರು
4. ಶ್ರೀ ಎಂ.ಎನ್. ಸತೀಶ್‌ಕುಮಾರ್, ಗ್ರಾಮಲೆಕ್ಕಿಗ
5. ಶ್ರೀ ಕೆ.ವಿ. ಚಂಗಲರಾಯಪ್ಪ, ಪ್ರ.ದ.ಸಹಾಯಕ (ಪ್ರಸ್ತುತ ನಿವೃತ್ತ)
6. ಶ್ರೀ ಎ. ಶಿವರಾಜ್, ಬೆರಳಚ್ಚುಗಾರರು.

ವಿಚಾರಣಾಧಿಕಾರಿಗಳು ಮೇಲೆ ಕ್ರ.ಸಂ. (2)ರಲ್ಲಿ ಓದಲಾದ ದಿನಾಂಕ: 8.8.2005ರ ಆದೇಶದ ಅನ್ವಯ ಜಂಟಿ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು ಮೇಲೆ ಓದಲಾದ ಕ್ರ.ಸಂ. 3 ರನ್ವಯ ಸರ್ಕಾರಕ್ಕೆ ಸಲ್ಲಿಸಿ ಈ ಕೆಳಕಂಡ ಅಧಿಕಾರಿ/ನೌಕರರ ವಿರುದ್ಧ ಮಾಡಲಾದ ಆಪಾದನೆಗಳು ಸಾಬೀತಾಗಿವೆಯೆಂದು ತಿಳಿಸಿರುತ್ತಾರೆ.

1. ಶ್ರೀ ದಾದರಾವ್, ಹಿಂದಿನ ತಹಶೀಲ್ದಾರ್, ಕೋಲಾರ ತಾಲ್ಲೂಕು, ಕೋಲಾರ ಜಿಲ್ಲೆ
2. ಶ್ರೀ ಶ್ರೀನಿವಾಸ್, ಶಿರಸ್ತೇದಾರ್, (ಪ್ರಸ್ತುತ ನಿವೃತ್ತ)
3. ಶ್ರೀ ಗಂಗಯ್ಯ, ರಾಜಸ್ವ ನಿರೀಕ್ಷಕರು
4. ಶ್ರೀ ಎ. ಶಿವರಾಜ್, ಬೆರಳಚ್ಚುಗಾರರು.

ಹಾಗೂ ಶ್ರೀ ಎಂ.ಎನ್. ಸತೀಶ್‌ಕುಮಾರ್, ಗ್ರಾಮ ಲೆಕ್ಕಿಗ ಮತ್ತು ಶ್ರೀ ಕೆ.ವಿ. ಚಂಗಲರಾಯಪ್ಪ, ಪ್ರ.ದ.ಸ (ಈಗ ನಿವೃತ್ತರು) ಇವರುಗಳ ವಿರುದ್ಧ ಮಾಡಲಾಗಿರುವ ಆಪಾದನೆಗಳು ಸಾಬೀತಾಗಿಲ್ಲವೆಂದು ವಿಚಾರಣಾ ವರದಿಯಲ್ಲಿ ತಿಳಿಸಿರುತ್ತಾರೆ. ವಿಚರಣಾಧಿಕಾರಿಗಳ ವರದಿಯನ್ನು ಸರ್ಕಾರವು ಒಪ್ಪಿಕೊಂಡು ಆರೋಪ ಸಾಬೀತಾಗಿರುವ ಅಧಿಕಾರಿ/ ನೌಕರರ ವಿರುದ್ಧ

ಪ್ರತ್ಯೇಕವಾಗಿ ನೌಕರರ ವಿಧಿಸುವ ಬಗ್ಗೆ ಕ್ರಮ ಕೈಗೊಳ್ಳಲಾಗುತ್ತಿದೆ. ಪ್ರಸ್ತುತ ಆರೋಪ ಸಾಬೀತು ಆಗಿರದ ನೌಕರರ ಬಗ್ಗೆ ಆದೇಶ ಮಾಡಬೇಕಾಗಿರುವುದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂ: ಆರ್‌ಡಿ 44 ಎಡಿಇ 2004, ಬೆಂಗಳೂರು ದಿನಾಂಕ: 28.3.2007**

ಪ್ರಸ್ತಾವನೆಯಲ್ಲಿ ಕೂಲಂಕುಷವಾಗಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಈ ಪ್ರಕರಣದಲ್ಲಿ ಭಾಗಿಯಾಗಿರುವ ಶ್ರೀ ಎಂ.ಎನ್. ಸತೀಶ್‌ಕುಮಾರ್, ಗ್ರಾಮಲೆಕ್ಕಿಗರು ಮತ್ತು ಶ್ರೀ ಕೆ.ವಿ. ಚಂಗಲರಾಯಪ್ಪ, ಪ್ರಥಮ ದರ್ಜೆ ಸಹಾಯಕರು (ನಿವೃತ್ತ) ಇವರ ವಿರುದ್ಧ ಹೂಡಲಾಗಿದ್ದ ಜಂಟಿ ಇಲಾಖಾ ವಿಚಾರಣೆಯಲ್ಲಿ ಈ ಪ್ರಕರಣದ ಮಟ್ಟಿಗೆ ಇವರುಗಳನ್ನು ದೋಷಮುಕ್ತರನ್ನಾಗಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 623

**ಆರ್. ಶ್ರೀಮತಿ ಚಂದ್ರಶೇಖರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು-3)

**ವಿಷಯ:** ಕಾರ್ಕಳ ತಾಲ್ಲೂಕು ಹೆಬ್ರಿ ಗ್ರಾಮದ ಸ.ನಂ.ಬ್ರ: 214:1 ರಲ್ಲಿ ರಿಸರ್ವ ಫಾರೆಸ್ಟ್ ಜಮೀನನ್ನು ಅಕ್ರಮವಾಗಿ ಮಂಜೂರು ಮಾಡಿದ ಅಧಿಕಾರಿ/ಸಿಬ್ಬಂದಿ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಬಗ್ಗೆ.

**ಓದಲಾಗಿದೆ:-**

1. ಸರ್ಕಾರದ ಆದೇಶ ಸಂ: ಆರ್‌ಡಿ 44 ಎಡಿಇ 2004, ದಿನಾಂಕ: 6.10.2006
2. ಸರ್ಕಾರದ ತಿದ್ದೋಲೆ ಸಂ: ಕಂ.ಇ 07 ಎಡಿಇ 2005, ದಿನಾಂಕ: 10.11.2006
3. ಶ್ರೀ ಬಿ. ಶಂಕರನಾರಾಯಣ ಭಟ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಕೈರಂಗಳ ಗ್ರಾಮ, ಭಂಟ್ವಳ ತಾಲ್ಲೂಕು ಇವರ ದಿನಾಂಕ: 18.10.2006ರ ಮನವಿ.
4. ಸರ್ಕಾರದ ಆದೇಶ ಸಂಖ್ಯೆ: ಕಂಇ 07 ಎಡಿಇ 2005, ದಿನಾಂಕ: 19.12.2006
5. ಶ್ರೀ ಬಿ. ಶಂಕರನಾರಾಯಣ ಭಟ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಕೈರಂಗಳ ಗ್ರಾಮ, ಭಂಟ್ವಾಳ ತಾಲ್ಲೂಕು ಇವರ ದಿನಾಂಕ: 19.1.2007ರ ಮನವಿ.

**ಪ್ರಸ್ತಾವನೆ:**

ಕಾರ್ಕಳ ತಾಲ್ಲೂಕು, ಹೆಬ್ರಿ ಗ್ರಾಮದ ಸ.ನಂ: 214/1 ರಲ್ಲಿನ ಅರಣ್ಯ ಜಮೀನು ಅಕ್ರಮ ಸಕ್ರಮದಡಿ ಕಾನೂನು ಬಾಹಿರವಾಗಿ ಮಂಜೂರು ಮಾಡಿರುವ ಸಂಬಂಧ ಹಿಂದಿನ ತಹಶೀಲ್ದಾರರಾದ ಶ್ರೀ ಶಾಂತಾರಾಮ್ ಚಿಪಳೂಣ್‌ಕರ್ ಮತ್ತಿತರ ನೌಕರರ ವಿರುದ್ಧ ಜಂಟಿ ಇಲಾಖೆ ವಿಚಾರಣೆಯನ್ನು ಜರುಗಿಸಲು ಮೇಲೆ ಓದಲಾದ ಕ್ರ.ಸಂ. (1)ರ ಆದೇಶದನ್ವಯ ಶ್ರೀ ಬಿ. ಶಂಕರನಾರಾಯಣ ಭಟ್, ನಿವೃತ್ತ ಜಿಲ್ಲಾ ಮತುತ ಸತ್ರ ನ್ಯಾಯಾಧೀಶರು, ಕೈರಂಗಳ ಗ್ರಾಮ ಭಂಟ್ವಳ ತಾಲ್ಲೂಕು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಮೇಲೆ ಓದಲಾದ ಕ್ರ.ಸಂ. (2)ರಲ್ಲಿ ದಿನಾಂಕ: 6.10.2006ರ ಆದೇಶಕ್ಕೆ ತಿದ್ದೋಲೆಯನ್ನು ಹೊರಡಿಸಿದ್ದು, ಆದೇಶ ಸಂಖ್ಯೆಯನ್ನು "RD 44 ADE 2004" ಕ್ಕೆ ಬದಲಾಗಿ "RD 07 ADE 2005" ಎಂದು ಓದಿಕೊಳ್ಳಲು ತಿಳಿಸಲಾಗಿತ್ತು.

ಮೇಲೆ ಓದಲಾದ ಕ್ರ.ಸಂ. (3)ರಲ್ಲಿ ವಿಚಾರಣಾಧಿಕಾರಿಗಳಾದ ಶ್ರೀ ಬಿ. ಶಂಕರನಾರಾಯಣಭಟ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶಕರು ಇವರು ದಿನಾಂಕ: 18.10.2006ರ ಮನವಿಯಲ್ಲಿ ಸದರಿ ವಿಷಯದ ಜಂಟಿ ಇಲಾಖೆ ವಿಚಾರಣೆಯನ್ನು ನಡೆಸಲು ಜಿಲ್ಲಾಧಿಕಾರಿಗಳ ಕಛೇರಿ, ಉಡುಪಿ ಬದಲಾಗಿ ಜಿಲ್ಲಾಧಿಕಾರಿಗಳ ಕಛೇರಿ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇಲ್ಲಿಗೆ ಬದಲಾಯಿಸಲು ಕೋರಿರುತ್ತಾರೆ. ವಿಚಾರಣಾಧಿಕಾರಿಯವರ ಮನವಿಯನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ ಜಂಟಿ ಇಲಾಖಾ ವಿಚಾರಣೆಯನ್ನು ಜಿಲ್ಲಾಧಿಕಾರಿಗಳ ಕಛೇರಿ ಉಡುಪಿ ಎಂಬುದರ ಬದಲಾಗಿ ಜಿಲ್ಲಾಧಿಕಾರಿಗಳ ಕಛೇರಿ, ದಕ್ಷಿಣ ಕನ್ನಡ ಜಿಲ್ಲೆ ಎಂದು ಬದಲಿಸಿ ಮೇಲೆ ಓದಲಾದ ಕ್ರ.ಸಂ. (4)ರಲ್ಲಿ ಆದೇಶಿಸಲಾಗಿತ್ತು.

ಪ್ರಸ್ತುತ ಮೇಲೆ ಓದಲಾದ ಕ್ರ.ಸಂ. (5)ರಲ್ಲಿ ವಿಚಾರಣಾಧಿಕಾರಿಗಳಾದ ಶ್ರೀ ಬಿ. ಶಂಕರನಾರಾಯಣ ಭಟ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಇವರು ತಮಗೆ ಆರೋಗ್ಯ ಸರಿಯಿಲ್ಲದ ಕಾರಣ ಇಲಾಖಾ ವಿಚಾರಣೆಯನ್ನು ನಡೆಸಲು ಸಾಧ್ಯವಾಗುವುದಿಲ್ಲವೆಂದು ಮನವಿಯನ್ನು ಸಲ್ಲಿಸಿರುತ್ತಾರೆ. ಅದರಂತೆ, ಸರ್ಕಾರವು ಸದರಿಯವರ ಮನವಿಯನ್ನು ಪರಿಗಣಿಸಿ ಈ ಕೆಳಕಂಡಂತೆ ವಿಚಾರಣಾಧಿಕಾರಿಯನ್ನು ಬದಲಾಯಿಸಿ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಆರ್‌ಡಿ 07 ಎಡಿಇ 2005, ಬೆಂಗಳೂರು ದಿನಾಂಕ: 10.4.2007**

ಪ್ರಸ್ತಾವನೆಯಲ್ಲಿ ಕೂಲಂಕುಷವಾಗಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರದ ಆದೇಶ ಸಂ: ಆರ್‌ಡಿ 07 ಎಡಿಇ 2005, ದಿನಾಂಕ: 6.10.2006 ಹಾಗೂ 19.12.2006ರಲ್ಲಿ ಜಂಟಿ ಇಲಾಖಾ ವಿಚಾರಣೆ ನಡೆಸಲು ನಿಯೋಜಿಸಲಾಗಿದ್ದ

ವಿಚಾರಣಾಧಿಕಾರಿಗಳಾದ, ಶ್ರೀ ಬಿ. ಶಂಕರನಾರಾಯಣಭಟ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಭಂಟ್ವಾಳ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ ಇವರ ಬದಲಾಗಿ ಶ್ರೀ ಸುಬ್ಬರಾವ್, ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ನಂ. 1033, 9ನೇ 'ಬಿ' ಮೇನ್, 8ನೇ ಕ್ರಾಸ್, ಜ್ಯೂಡಿಷಿಯಲ್ ಲೇಔಟ್, ಜಿಕೆವಿಕೆ ಪೋಸ್ಟ್ ಬೆಂಗಳೂರು–560 065 ಇವರನ್ನು ಪ್ರಸ್ತುತ ಪ್ರಕರಣದಲ್ಲಿ ವಿಚಾರಣಾಧಿಕಾರಿಗಳಾಗಿ ನೇಮಿಸಿ ಆದೇಶಿಸಲಾಗಿದೆ. ಉಳಿದ ಅಂಶಗಳೂ ದಿನಾಂಕ: 6.10.2006ರ ಆದೇಶದಲ್ಲಿರುವಂತೆ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 679

**ಆರ್. ಶ್ರೀಮತಿ ಚಂದ್ರಶೇಖರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** ಬೆಂಗಳೂರು ಉತ್ತರ ತಾಲ್ಲೂಕು ಯಲಹಂಕ ವ್ಯಾಪ್ತಿಯ ಬ್ಯಾಟರಾಯನಪುರ ಉಪ ನೋಂದಣಿ ಕಛೇರಿ ಕಟ್ಟಡ ಬಾಡಿಗೆ ನಿಗದಿ ಪಡಿಸುವ ಕುರಿತು.

**ಓದಲಾಗಿದೆ:–** ನೋಂದಣಿ ಮಹಾ ಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರ ಪತ್ರ ಸಂಖ್ಯೆ: ಬಿಎಲ್‌ಡಿ/15/2006–07 ದಿನಾಂಕ 30.3.2007.

**ಪ್ರಸ್ತಾವನೆ:**

ಬೆಂಗಳೂರು ನಗರ ಜಿಲ್ಲೆಯಲ್ಲಿ ಅಧಿಕ ಕೆಲಸದ ಒತ್ತಡವಿರುವ 6 ಉಪ ನೋಂದಣಿ ಕಛೇರಿಗಳನ್ನು ವಿಭಜಿಸಿ 27 ಉಪ ನೋಂದಣಿ ಕಛೇರಿಗಳನ್ನಾಗಿ ವಿಂಗಡಿಸಲಾಗಿದೆ. ಆ ಪೈಕಿ ಬೆಂಗಳೂರು ಉತ್ತರ ತಾಲ್ಲೂಕು ವ್ಯಾಪ್ತಿಯ ಬ್ಯಾಟರಾಯನಪುರದಲ್ಲಿ ಹೊಸದಾಗಿ ಉಪ ನೋಂದಣಿ ಕಛೇರಿ ತೆರೆಯಲು ಆದೇಶಿಸಲಾಗಿದೆ. ಸದರಿ ಉಪ ನೋಂದಣಿ ಕಛೇರಿಗೆ ಶ್ರೀ ಸುನೀಲ್ ಕುಮಾರ್ ಇವರ ಒಡೆತನಕ್ಕೆ ಸೇರಿದ ನಿವೇಶನ ಸಂಖ್ಯೆ: 2255, ಮಿನಿಸ್ಟ್ರಿ ಆಫ್ ಕಮ್ಯೂನಿಕೇಷನ್ ಎಂಪ್ಲಾಯಿಸ್ ಹೌಸಿಂಗ್ ಕೋ ಅಪರೇಟಿವ್ ಸೊಸೈಟಿ, ಕೋಡಿಗೆ ಹಳ್ಳಿ, ಸಹಕಾರ ನಗರ, ಬೆಂಗಳೂರು–92 ರಲ್ಲಿ ಉಪ ನೋಂದಣಿ ಕಛೇರಿಗಾಗಿ ಬಾಡಿಗೆ ಪಡೆಯಲಾಗಿದೆ. ಸದರಿ ಕಟ್ಟಡದ ಬಾಡಿಗೆಯಲ್ಲಿ ಕಾರ್ಯಪಾಲಕ ಇಂಜಿನಿಯರ್ (ರಸ್ತೆ ಮತ್ತು ಕಟ್ಟಡಗಳ ವಿಶೇಷ ವಿಭಾಗ), ಬೆಂಗಳೂರು ಇವರು ಮಾಸಿಕ ರೂ.18,960/– ಬಾಡಿಗೆ ನಿಗದಿ ಪಡಿಸಿರುತ್ತಾರೆ. ಲೋಕೋಪಯೋಗಿ ಇಲಾಖೆಯು ನಿಗದಿ ಪಡಿಸಿರುವಂತೆ ಸದರಿ ಕಟ್ಟಡಕ್ಕೆ ಬಾಡಿಗೆ ನಿಗದಿಪಡಿಸಿ ಮೇಲೆ ಓದಲಾಗಿರುವ ದಿನಾಂಕ: 3.3.2007ರ ಪ್ರಸ್ತಾವನೆಯಲ್ಲಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂ: ಕಂಇ 138 ಮುನೋಮು 2007 ಬೆಂಗಳೂರು, ದಿನಾಂಕ: 2.4.2007**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಯಿತು. ಬೆಂಗಳೂರು ನಗರದಲ್ಲಿ ಬೆಂಗಳೂರು ಉತ್ತರ ತಾಲ್ಲೂಕು ಯಲಹಂಕ ವ್ಯಾಪ್ತಿಯ ಬ್ಯಾಟರಾಯನಪುರದಲ್ಲಿ ಉಪ ನೋಂದಣಿ ಕಛೇರಿಯ ಸಲುವಾಗಿ ಶ್ರೀ ಸುನೀಲ್ ಕುಮಾರ್ ಇವರ ಒಡೆತನಕ್ಕೆ ಸೇರಿದ ನಿವೇಶನ ಸಂಖ್ಯೆ: 2255, ಮಿನಿಸ್ಟ್ರಿ ಆಫ್ ಕಮ್ಯೂನಿಕೇಷನ್ ಎಂಪ್ಲಾಯಿಸ್ ಹೌಸಿಂಗ್ ಕೋ ಅಪರೇಟಿವ್ ಸೊಸೈಟಿ, ಕೋಡಿಗೆ ಹಳ್ಳಿ, ಸಹಕಾರ ನಗರ, ಬೆಂಗಳೂರು–92 ಕಟ್ಟಡವನ್ನು ಮಾಸಿಕ ರೂ. 18960/– ರಂತೆ ಬಾಡಿಗೆ ನೀಡಲು ಸರ್ಕಾರವು ಅನುಮೋದನೆ ನೀಡಿದೆ.

ಸದರಿ ಬಾಡಿಗೆ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2030–03–001–071 ನ್ನು 2007–08ರ ಆಯವ್ಯಯದಲ್ಲಿ ಭರಿಸಲು ಅನುಮೋದನೆ ನೀಡಲಾಗಿದೆ.

ಪ್ರಸ್ತುತ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 1996 ದಿನಾಂಕ: 10.7.1996 ರನ್ವಯ ಕಾರ್ಯದರ್ಶಿಗಳಿಗೆ ಪ್ರದತ್ತವಾಗಿರುವ ಅಧಿಕಾರದ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ
**ಎಂ.ಎಫ್. ಯರಗೊಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ
(ನೋಂದಣಿ ಮತ್ತು ಮುದ್ರಾಂಕ)

ಪಿ.ಆರ್. 657